# ಸೊಂಡೂರು ಸಂಸ್ಥಾನಿಕರು : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕ
ಭೋಜ್ಯನಾಯ್ಕ ಎಲ್.ಎಚ್

ಮಾರ್ಗದರ್ಶಕರು
ಡಾ.ವಿರೂಪಾಕ್ಷಿ ಪೂಜಾರಹಳ್ಳಿ
ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೧ - ೧೨

# ಸೊಂಡೂರು ಸಂಸ್ಥಾನಿಕರು : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕ
ಭೋಜ್ಯನಾಯ್ಕ ಎಲ್.ಎಚ್

ಮಾರ್ಗದರ್ಶಕರು
ಡಾ.ವಿರೂಪಾಕ್ಷಿ ಪೂಜಾರಹಳ್ಳಿ
ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೧-೧೨

# ಪ್ರಮಾಣ ಪತ್ರ

ಸೊಂಡೂರು ಸಂಸ್ಥಾನಿಕರು : ಚಾರಿತ್ರಿಕ ಅಧ್ಯಯನ ಎಂಬ ನಿಬಂಧವನ್ನು ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಸಹ ಪ್ರಾಧ್ಯಾಪಕರು, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಭೋಜ್ಯನಾಯ್ಕ ಎಲ್. ಎಚ್

ಭೋಜ್ಯನಾಯ್ಕ ಎಲ್.ಎಚ್
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ : 30-6-2012

# ದೃಢೀಕರಣ ಪತ್ರ

ಸೊಂಡೂರು ಸಂಸ್ಥಾನಿಕರು : ಚಾರಿತ್ರಿಕ ಅಧ್ಯಯನ  ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗದ ಎಂ.ಫಿಲ್.ಪದವಿಗಾಗಿ ಭೋಜ್ಯನಾಯ್ಕ ಎಲ್.ಎಚ್ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ.ವಿರೂಪಾಕ್ಷ ಪೂಜಾರಹಳ್ಳಿ
ಮಾರ್ಗದರ್ಶಕರು ಮತ್ತು ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ   : ವಿದ್ಯಾರಣ್ಯ
ದಿನಾಂಕ :

## ಪರಿವಿಡಿ

ಅಧ್ಯಾಯ - ಒಂದು

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವಿಧಾನ

೧.೫. ಅಧ್ಯಯನದ ಸ್ವರೂಪ

ಅಧ್ಯಾಯ - ಒಂದು

# ಪ್ರಸ್ತಾವನೆ

ಆಧುನಿಕ ಜಗತ್ತಿನಲ್ಲಿ ವೈಚಾರಿಕತೆ ಜಾಗತೀಕರಣದಂತಹ ವಿಷಯಗಳು ಪ್ರಮುಖವಾಗಿ ಚರ್ಚೆಗೆ ಒಳಪಡುತ್ತವೆ. ಇಂತಹ ಪ್ರಕ್ರಿಯೆಗಳಿಂದ ಚರಿತ್ರೆಯನ್ನು ನಿರೂಪಿಸುವ ಜನಜೀವನವನ್ನು ಚಿತ್ರಿಸುವ ಸಾಂಸ್ಕೃತಿಕ ಮೌಲ್ಯಗಳನ್ನು ಎತ್ತಿಹಿಡಿಯುವ ಮೂಲಕ ಐತಿಹಾಸಿಕ ವಿಚಾರಗಳು ಇಂದು ಕ್ರಮೇಣವಾಗಿ ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ವ್ಯಾಪಕ ಪ್ರಚಾರದಲ್ಲಿರುವ ರಾಜಮನೆತನಗಳ ರಾಜಕೀಯ ಚಿತ್ರಣವನ್ನು ಮಾತ್ರ ಇತಿಹಾಸವೆಂದು ಭಾವಿಸಲಾಗಿತ್ತು. ಪ್ರಮುಖ ರಾಜಮನೆತನಗಳ ಶ್ರೇಯೋಭಿವೃದ್ಧಿಗೆ ಬಲವಾದ ಅಡಿಪಾಯ ಹಾಕಿದವರ ವಿವರಗಳಿಲ್ಲ. ರಾಜ್ಯ ರಕ್ಷಣೆಗೆ ಸದಾ ಕಂಕಣ ಬದ್ಧರಾಗಿ ಹೋರಾಡಿದ ಸೈನಿಕರು ಸಾಮಂತರು, ಮಾಂಡಲಿಕರು, ಪಾಳೆಯಗಾರರು, ಸಂಸ್ಥಾನಿಕರ ಚರಿತ್ರೆಯನ್ನು ಬೆಳಕಿಗೆ ತರುವಲ್ಲಿ ಸಂಶೋಧಕರು ಅನಾಸಕ್ತಿಯನ್ನು ತಾಳಿದ್ದಾರೆ. ಇದರಿಂದಾಗಿ ತಳಮಟ್ಟದ ಚರಿತ್ರೆಯು ಕಣ್ಮರೆಯಾಗಿ ಮೇಲ್ಮಟ್ಟದ ರಾಜ ವೈಭೋಗವು ಇತಿಹಾಸದಲ್ಲಿ ಗುರುತಿಸಲ್ಪಡುತ್ತಿದೆ. ಆದ್ದರಿಂದ ಪ್ರಸ್ತುತ ಅಧ್ಯಯನವು ಸ್ಥಳೀಯಚರಿತ್ರೆ ಕುರಿತದ್ದಾಗಿದೆ. ಸ್ಥಳೀಯ ಚರಿತ್ರೆಯು ತನ್ನದೇ ಆದ ಭೌಗೋಳಿಕ ಮಿತಿಗೊಳಪಟ್ಟಿದೆ. ಸ್ಥಳೀಯ ಸಮುದಾಯಗಳ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಇತ್ಯಾದಿ ಸಂಗತಿಗಳ ಲಿಖಿತ ಮತ್ತು ಮೌಖಿಕ ವಿವರಗಳನ್ನು ಸಂಗ್ರಹಿಸಿ ಕೊಡುವ ವಿಪುಲ ಅವಕಾಶ ಸ್ಥಳೀಯ ಚರಿತ್ರೆ ವ್ಯಾಪ್ತಿಗೆ ಬರುತ್ತದೆ. ಈ ಹಿನ್ನೆಲೆಯಲ್ಲಿ ಸೊಂಡೂರಿನ ಸಂಸ್ಥಾನದ ಚರಿತ್ರೆಯನ್ನು ಪುರಾತತ್ವಿಯ ಮತ್ತು ಮೌಖಿಕ ಆಕರಗಳ ಮೂಲಕ ಅಧ್ಯಯನ ಮಾಡುವ ಪ್ರಯತ್ನ ಇಲ್ಲಿದೆ.

ಸೊಂಡೂರಿಗೆ ಪ್ರಾಚೀನ ಕಾಲದಿಂದಲೂ ತನ್ನದೇ ಆದ ಚಾರಿತ್ರಿಕ ಮಹತ್ವವಿದೆ. ಈ ಪ್ರದೇಶವು ಮೌರ್ಯ, ಶಾತವಾಹನ, ಕದಂಬ, ಗಂಗ, ಬಾದಾಮಿ ಚಾಲುಕ್ಯರು, ಕಲ್ಯಾಣಿ ಚಾಲುಕ್ಯರು, ರಾಷ್ಟ್ರಕೂಟರು,

ದೇವಗಿರಿಯ ಸೇವುಣರು, ವಿಜಯನಗರದ ಅರಸರು ಹಾಗೂ ವಿಜಾಪುರದ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತ್ತು. ವಿಜಯನಗರೋತ್ತರ ಕಾಲದಲ್ಲಿ ಸೊಂಡೂರಿನ ಪ್ರದೇಶದಲ್ಲಿ ಗುಡೇಕೋಟೆಯ ಪಾಳೆಯಗಾರರು, ಜರಿಮಲೆಯ ಪಾಳೆಯಗಾರರು ಪ್ರಮುಖವಾಗಿ ಆಳ್ವಿಕೆ ನಡೆಸಿರುತ್ತಾರೆ.

ಸೊಂಡೂರಿನ ಘೋರ್ಪಡೆ ರಾಜಮನೆತನ ಸಂಸ್ಥಾನವಾಗಿ ಚರಿತ್ರೆಯ ವಿವಿಧ ಸಂದರ್ಭದಲ್ಲಿ ಖ್ಯಾತಿ ಪಡೆದಿತ್ತು. ಸೊಂಡೂರನ್ನು ಜರಿಮಲೆ ಪಾಳೆಯಗಾರರಿಂದ ಘೋರ್ಪಡೆ ವಂಶಸ್ಥರು ವಶಪಡಿಸಿಕೊಂಡು ಈ ಪ್ರದೇಶವನ್ನು ಹಲವಾರು ವರ್ಷಗಳವರೆಗೆ ಆಳ್ವಿಕೆ ಮಾಡಿದ್ದಾರೆ. ಇವರ ಮೂಲ ಪುರುಷ ಸುಜ್ಜನ್ ಸಿಂಗ್‌ರಿಂದ ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರೆಗೆ ಹಲವಾರು ವರ್ಷಗಳ ಕಾಲ ಅವರು ಆಳ್ವಿಕೆ ಮಾಡಿದ್ದಾರೆ. ಇವರ ಆಳ್ವಿಕೆಯ ಕಾಲಾವಧಿಯಲ್ಲಿ ಹಲವಾರು ಏರುಪೇರುಗಳಾಗಿವೆ. ಹೈದರಾಲಿ ಟಿಪ್ಪುಸುಲ್ತಾನರ ಆಕ್ರಮಣದಿಂದ ಹಲವಾರು ವರ್ಷಗಳ ಕಾಲ ಈ ಸಂಸ್ಥಾನ ತತ್ತರಿಸಿ ಹೋಗಿತ್ತು.

ಟಿಪ್ಪು ಮರಣ ಹೊಂದಿದ ಮೇಲೆ ಸೊಂಡೂರಿನ ಸಂಸ್ಥಾನಿಕರು ಬ್ರಿಟಿಷರ ಆಳ್ವಿಕೆಯನ್ನು ಒಪ್ಪಿಕೊಂಡು ಅವರ ಏಜೆಂಟರನ್ನು ನೇಮಕ ಮಾಡಿಕೊಂಡಿದ್ದರು. ಬ್ರಿಟಿಷ್ ಏಜೆಂಟರ ಅಧೀನದಲ್ಲಿ ಹಲವಾರು ವರ್ಷಗಳ ಕಾಲ ಆಳ್ವಿಕೆಯನ್ನು ಮಾಡುತ್ತಾರೆ. ಹಾಗಾಗಿ ಸೊಂಡೂರು ಸಂಸ್ಥಾನಿಕರು ಅನೇಕ ಸಂಕಷ್ಟ, ಸಂಕೋಲೆಗಳ ಮಧ್ಯೆ ಆಳ್ವಿಕೆಯನ್ನು ನಡೆಸಿದ್ದಾರೆ.

### ಅಧ್ಯಯನದ ಉದ್ದೇಶ

ಚರಿತ್ರೆಯ ಅಧ್ಯಯನವು ಇಂದು ವೈಚಾರಿಕ ಹಾಗೂ ವೈಜ್ಞಾನಿಕ ದೃಷ್ಟಿಕೋನದತ್ತ ಸಾಗಿದೆ. ಇಂದು ಸ್ಥಳೀಯ ಚರಿತ್ರೆಯನ್ನು ಕುರಿತು ಸೂಕ್ಷ್ಮ ಅಧ್ಯಯನಗಳು ನಡೆಯುತ್ತಿವೆ. ಚರಿತ್ರೆ ಅಧ್ಯಯನದಲ್ಲಿ ಸ್ಥಳೀಯಚರಿತ್ರೆ ಇಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಭಾರತದ ಚರಿತ್ರೆಯು ಪ್ರದೇಶ, ಪ್ರಾಂತ್ಯ, ರಾಜ್ಯ, ಸಂಸ್ಥೆ ಹಾಗೂ ವಿವಿಧ ಜನಾಂಗಗಳ ಚರಿತ್ರೆ ಎಂಬುದನ್ನು ಮತ್ತೊಮ್ಮೆ ಪರಿಶೀಲಿಸುವುದು ಅಗತ್ಯವಾಗಿದೆ. ವಿವಿಧ ಪ್ರದೇಶದ ಜನರ ಜೀವನ ವಿಧಾನ, ಭಿನ್ನವಾದ ಗುಂಪು ಸಮುದಾಯಗಳು ಇವುಗಳಿಂದ ಕೂಡಿ ನಾಡಿನ ಇತಿಹಾಸವನ್ನು ನಿರ್ಮಿಸಬೇಕಾಗಿದೆ.

ಕರ್ನಾಟಕದ ಒಂದು ಪ್ರಮುಖ ಸಂಸ್ಥಾನಿಕರಾಗಿ ಆಳ್ವಿಕೆ ಮಾಡಿದ ಸೊಂಡೂರು ರಾಜಮನೆತನದ ಬಗ್ಗೆ ಈ ಹಿಂದೆ ಕೆಲವು ಲೇಖನಗಳು ಪ್ರಟವಾಗಿವೆಯೆ ಹೊರತು, ಯಾವುದೇ ಸಮಗ್ರ ಅಧ್ಯಯನಗಳಾಗಿಲ್ಲ. ಹಾಗಾಗಿ ಸೊಂಡೂರು ಸಂಸ್ಥಾನಿಕರ ರಾಜ್ಯಾಡಳಿತ ಅವರ ಕೊಡುಗೆಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲಾಗುವುದು. ಮೂಲಕ ಸೊಂಡೂರು ಸಂಸ್ಥಾನದ ಮೂಲ, ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿ ಸಂಸ್ಥಾನಿಕರ ಹುಟ್ಟು ಮತ್ತು ಬೆಳವಣಿಗೆಯ ಬಗ್ಗೆ ಚರ್ಚಿಸಲಾಗುವುದು.

ಸೊಂಡೂರು ಸಂಸ್ಥಾನಿಕರ ಸ್ವತಂತ್ರ ಆಳ್ವಿಕೆ ಹೈದರಾಲಿ-ಟಿಪ್ಪುಸುಲ್ತಾನ್, ಬ್ರಿಟೀಷರ ನಡುವಿನ ಸಂಬಂಧ ಹಾಗೂ ಸೊಂಡೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟ, ಏಕೀಕರಣ ಚಳವಳಿ ಮತ್ತು ಮೈಸೂರು ರಾಜ್ಯದಲ್ಲಿ ಸೊಂಡೂರು ಸಂಸ್ಥಾನದ ವಿಲೀನ ಕುರಿತು ವಿವರಿಸಲಾಗುವುದು.

ಪ್ರತಿಯೊಂದು ಸಾಮ್ರಾಜ್ಯಕ್ಕೆ ತನ್ನದೇ ಆದ ಸಾಮಾಜಿಕ ಹಾಗೂ ಆರ್ಥಿಕ ಜೀವನ ಒಳಗೊಂಡಿರುತ್ತದೆ. ಅದರಂತೆ ಸೊಂಡೂರು ಸಂಸ್ಥಾನಿಕರ ಸಾಮಾಜಿಕ, ಆರ್ಥಿಕ ಹಾಗೂ ಸಂಸ್ಥಾನದ ಜನರ ಜೀವನ ಸ್ಥಿತಿಗತಿಗಳನ್ನು ವಿವರಿಸಲಾಗುವುದು.

ಸೊಂಡೂರು ಸಂಸ್ಥಾನಿಕರಲ್ಲಿ ವಿಶೇಷವಾಗಿ ನೀಡಿದ ಕೊಡುಗೆ ಎಂದರೆ ಅವರು ಕಟ್ಟಿಸಿದ ಅರಮನೆ. ಅರಮನೆ ಕೃಷ್ಣನಗರದ ಕೋಟೆ ಘೋರ್ಪಡೆ ವಂಶದವರ ಹೆಸರಿನಲ್ಲಿರುವ ಗ್ರಾಮಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ಸೊಂಡೂರು ಸಂಸ್ಥಾನದ ಘೋರ್ಪಡೆ ವಂಶದವರನ್ನು ಕುರಿತಾಗಿದ್ದು ಸಂಸ್ಥಾನದ ಉಗಮ, ಬೆಳವಣಿಗೆ, ಸೊಂಡೂರು ಪ್ರದೇಶದ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ, ಸೊಂಡೂರು ಸಂಸ್ಥಾನದ ಮೂಲ, ಹಾಗೂ ಸಂಸ್ಥಾನದಲ್ಲಿ ಆಳ್ವಿಕೆ ನಡೆಸಿದ ಪ್ರಮುಖ ಸಂಸ್ಥಾನಿಕರ ಕುರಿತು ಅಧ್ಯಯನ ಮಾಡಲಾಗುವುದು.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ಘೋರ್ಪಡೆ ವಂಶದವರು ಆಳ್ವಿಕೆ ನಡೆಸಿದ ಅವಧಿಯೆಂದು ಗುರುತಿಸಲಾದ ಕ್ರಿ.ಶ.೧೭೧೩ರಿಂದ ೧೯೪೭ರವರೆಗಿನ ಕಾಲಘಟ್ಟಕ್ಕೆ ಸೀಮಿತಗೊಳಿಸಲಾಗಿದೆ. ಅಧ್ಯಯನದ ಅವಶ್ಯಕತೆಗೆ ಅನುಗುಣವಾಗಿ ಘೋರ್ಪಡೆ ವಂಶದ ಪೂರ್ವ ಮತ್ತು ಉತ್ತರ ಕಾಲದ ಸಂಗತಿಗಳನ್ನು ಬಳಸಿಕೊಳ್ಳಲಾಗಿದೆ.

ಕ್ರಿ.ಶ.೧೭೧೩ರಿಂದ ೧೯೪೭ರವರೆಗಿನ ಕಾಲದಲ್ಲಿ ಈ ಸಂಸ್ಥಾನದಲ್ಲಿ ನಡೆದ ಪ್ರಮುಖ ಘಟನೆಗಳಾದ ಮೂಲ ರಾಜ್ಯಾಡಳಿತ, ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟ, ಮೈಸೂರು ರಾಜ್ಯದಲ್ಲಿ ಸಂಸ್ಥಾನದ ವಿಲೀನ, ಸಾಮಾಜಿಕ ಮತ್ತು ಆರ್ಥಿಕ ಜೀವನ ಪ್ರಮುಖ ಕೊಡುಗೆಗಳನ್ನು ಪ್ರಸ್ತುತ ಅಧ್ಯನ ಒಳಗೊಂಡಿದೆ.

**ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ**

ಸೊಂಡೂರಿನ ಸಂಸ್ಥಾನಿಕರ ಇತಿಹಾಸವನ್ನು ಕುರಿತು ಅನೇಕ ಸಂಶೋಧಕರು, ವಿದ್ವಾಂಸರು, ಸಾಹಿತಿಗಳು ಹಾಗೂ ಉತ್ಸಾಹಿ ತರುಣರು ವಿವಿಧ ನೆಲೆಯಲ್ಲಿ ಅಧ್ಯಯನ ಮಾಡಿ ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿದ್ದಾರೆ.

ಡಾ.ಮೃತ್ಯುಂಜಯ ರುಮಾಲೆಯವರು 'ಸೊಂಡೂರು ಒಂದು ಪರಿಚಯ' ಎಂಬ ಲೇಖನವನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಈ ತಾಲ್ಲೂಕಿನ ಐತಿಹಾಸಿಕ ಮತ್ತು ರಾಜಕೀಯ ಚರಿತ್ರೆಯನ್ನು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ.

ಜೆ.ಎಂ.ನಾಗಯ್ಯನವರು 'ಸೊಂಡೂರು ಸ್ಥಳನಾಮದ ಉತ್ಪತ್ತಿ ಮತ್ತು ರಾಜಕೀಯದ ಸಂಕ್ಷಿಪ್ತ ಇತಿಹಾಸ' ಬಗ್ಗೆ ವಿಶ್ಲೇಷಿಸಿದ್ದಾರೆ.

ಕರ್ನಾಟಕ ಇತಿಹಾಸ ದರ್ಶನ ಸಂಪುಟ-೧೦ರಲ್ಲಿ ಎಸ್.ಎಂ.ನಾಗಭೂಷಣ್‌ರವರು 'ಸೊಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆಯನ್ನು' ವಿವರಿಸಿದ್ದಾರೆ. ಡಾ.ವಿರೂಪಾಕ್ಷಿ ಪೂಜಾರಹಳ್ಳಿಯವರು 'ಬಳ್ಳಾರಿ ಜಿಲ್ಲೆಯ ಪಾಳೆಯಗಾರರು' ಎಂಬ ತಮ್ಮ ಕೃತಿಯಲ್ಲಿ ಸೊಂಡೂರು ಸಂಸ್ಥಾನಿಕರಾದ ಘೋರ್ಪಡೆಯವರ ರಾಜಕೀಯ ಚಿತ್ರಣವನ್ನು ಉಲ್ಲೇಖಿಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದ ಶಾಸನ ಸಂಪುಟ-೧ರಲ್ಲಿ ಸೊಂಡೂರು ತಾಲ್ಲೂಕಿಗೆ ಸಂಬಂಧಿಸಿದಂತೆ ೨೭ ಶಾಸನಗಳು ಪ್ರಕಟವಾಗಿವೆ. ಇವುಗಳ ಆಧಾರದ ಮೇಲೆ ಸೊಂಡೂರಿನ ಚಾರಿತ್ರಿಕ ಹಿನ್ನೆಲೆ ತಿಳಿಸಲಾಗಿದೆ. ಬಿ.ಶೇಷಾದ್ರಿ ಮತ್ತು ಇತರರು ಸಂಪಾದಿಸಿದ ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ ಎಂಬ ಕೃತಿಯಲ್ಲಿ ಸೊಂಡೂರು ಸಂಸ್ಥಾನವು ಭಾರತ ಗಣ ರಾಜ್ಯದಲ್ಲಿ ವಿಲೀನಗೊಂಡ ಸಂದರ್ಭ ಕುರಿತು ಸಂಕ್ಷಿಪ್ತ ಮಾಹಿತಿ ನೀಡಿದ್ದಾರೆ.

ಸಿ.ಎಸ್.ಪಾಟೀಲರು ಕರ್ನಾಟಕದ ಕೋಟೆಗಳು ಎಂಬ ಕೃತಿಯಲ್ಲಿ ಸೊಂಡೂರು ತಾಲ್ಲೂಕಿಗೆ ಸಂಬಂಧಿಸಿದ ಪ್ರಮುಖ ಕೋಟೆಗಳನ್ನು ಗುರುತಿಸಿದ್ದಾರೆ.

'ಲೋಹಾದ್ರಿ ಮಡಿಲು' ಸ್ಮರಣ ಸಂಚಿಕೆಯಲ್ಲಿ ಜಗದೀಶ್ ಕೆರೆನಹಳ್ಳಿ ಅವರು 'ಸೊಂಡೂರು ತಾಲ್ಲೂಕಿನ ಭೌಗೋಳಿಕ ಪರಿಚಯ' ಎಂಬ ಲೇಖನದಲ್ಲಿ ಈ ತಾಲ್ಲೂಕಿನ ಭೌಗೋಳಿಕ ಪರಿಸರದ ಮಾಹಿತಿಯನ್ನು ನೀಡಿರುವರು. ಇದೇ ಸಂಚಿಕೆಯಲ್ಲಿ ಡಾ.ಎ.ವೃಷಬೇಂದ್ರಾಚಾರ್ ಅವರು ವಂಶಾವಳಿಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ಗಿರಿಜಾ ರವರ 'ಸೊಂಡೂರು ತಾಲ್ಲೂಕಿನ ಪಾಳೆಯಗಾರರ ಕಾಲದ ಸ್ಮಾರಕಗಳು' ಎಂಬ ಲೇಖನದಲ್ಲಿ ಪಾಳೆಯಗಾರರ ಅವಧಿಯ ಕೋಟೆ-ಕೊತ್ತಲುಗಳನ್ನು ಕುರಿತು ಸಂಕ್ಷಿಪ್ತ ಮಾಹಿತಿ ನೀಡಿದ್ದಾರೆ.

ಯು.ಸೂರ್ಯನಾಥ ಕಾಮತ್ ಸಂಪಾದಿಸಿದ ಕರ್ನಾಟಕ ಸರ್ಕಾರದ ಬಳ್ಳಾರಿ ಗ್ಯಾಸೆಟಿಯರ್‌ನಲ್ಲಿ ಸೊಂಡೂರು ತಾಲ್ಲೂಕಿನ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಎಂ.ವೈ.ಘೋರ್ಪಡೆಯವರು "The Grand Resistance: Murari Rao Ghorpade and the 18th Century Deccan" ಎಂಬ ಕೃತಿಯಲ್ಲಿ ಮುರಾರಿರಾವ್ ಘೋರ್ಪಡೆ ಮತ್ತು ೧೮ನೇ ಶತಮಾನದ ಡೆಕ್ಕನ್ ಕುರಿತು ಮಾಹಿತಿಯನ್ನು ನೀಡಿದ್ದಾರೆ.

ಕೆ.ವಿ.ನಂದ್ಯಾಪ್ಪನವರು ಸೊಂಡೂರು ತಾಲೂಕು ದರ್ಶನದಲ್ಲಿ ಘೋರ್ಪಡೆ ವಂಶದ ಇತಿಹಾಸದ ಬಗ್ಗೆ ಪರಿಚಯಿಸಿದ್ದಾರೆ. ಡಾ.ಎಸ್.ಚಂದ್ರಶೇಖರ್‌ನವರು ವಸಾಹತುಕಾಲಿನ ಕರ್ನಾಟಕದಲ್ಲಿ ಸೊಂಡೂರಿನ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ನೀಡಿದ್ದಾರೆ.

ಸೊಂಡೂರಿನ ವಿರಕ್ತ ಮಠ ಎಂಬ ಲೇಖನದಲ್ಲಿ ಡಾ.ಮೃತ್ಯುಂಜಯ ರುಮಾಲೆಯವರು ವಿರಕ್ತಮಠದ ಪ್ರಾಚೀನತೆ ಗುರುಪರಂಪರೆ ಇತ್ತೀಚಿನ ಇತಿಹಾಸದ ಬಗ್ಗೆ ತಿಳಿಸಿದ್ದಾರೆ.

ಕೆಲ್ಸಲ್ ಜೆ.ಯವರ Madras Dustrict Gazetteer Bellary, vol-vರಲ್ಲಿ ಸೊಂಡೂರಿನ ಇತಿಹಾಸದ ಬಗ್ಗೆ ವಿವರಿಸಿದ್ದಾರೆ.

ಮೆಕಲನ್ ಸಿ.ಡಿ.ರವರ Manual of the administration, Madras presidency ಎಂಬ ಗ್ಯಾಸೆಟಿಯರ್‌ನಲ್ಲಿ ಘೋರ್ಪಡೆ ಸಂಸ್ಥಾನಿಕರ ಬಗ್ಗೆ ಸವಿವರವಾಗಿ ವಿವರಿಸಿದ್ದಾರೆ.

ಈ ಮೇಲೆ ತಿಳಿಸಿದ ಕೃತಿಗಳಲ್ಲಿ ಸೊಂಡೂರಿನ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಇಲ್ಲಿಯವರೆಗೆ ಸೊಂಡೂರು ಸಂಸ್ಥಾನಿಕರ ಆಳ್ವಿಕೆ ಮತ್ತು ಕೊಡುಗೆಗಳ ಬಗ್ಗೆ ಕುರಿತು ಸಂಪೂರ್ಣವಾಗಿ ಸಂಶೋಧನಾ ಕಾರ್ಯಗಳು ನಡೆದಿಲ್ಲ, ಸಂಸ್ಥಾನದ ಬಗ್ಗೆ ಯಾವುದೇ ಪ್ರತ್ಯೇಕ ಅಧ್ಯಯನಗಳು ನಡೆದಿಲ್ಲ. ಹೀಗಾಗಿ ಪ್ರಸ್ತುತ ವಿಷಯವನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗುವುದು.

### ಅಧ್ಯಯನದ ವಿಧಾನ

ಚರಿತ್ರೆಗೆ ಆಧಾರ ಅಗತ್ಯ, ಆಧಾರವಿಲ್ಲದ ಚರಿತ್ರೆಯಿಲ್ಲ. ಈ ಹಿನ್ನೆಲೆಯಲ್ಲಿ ಯಾವ ಬಗೆಯ ಚರಿತ್ರೆ ರಚಿಸಿದರೂ ಆಕರ ಮುಖ್ಯ. ಒಂದು ಪ್ರದೇಶದ ಚರಿತ್ರೆಯನ್ನು ಅಧ್ಯಯನ ಮಾಡುವಲ್ಲಿ ಕೆಲವು ಲಕ್ಷಣಗಳು ಪ್ರಮುಖವಾಗಿರುತ್ತವೆ. ಭೌಗೋಳಿಕ ವಿವರ, ಸ್ಥಳನಾಮ ಹಿನ್ನೆಲೆ, ಕೋಟೆ, ಶಾಸನ, ಅರಮನೆ, ವೀರಗಲ್ಲು ದೇವಾಲಯಗಳ ಮಾಹಿತಿ, ಹಸ್ತಪ್ರತಿ, ಕಂಚಿನ ಪತ್ರ, ತಾಳೆಯಗರಿ ಪ್ರತಿಗಳ ಸಂಗ್ರಹಗಳು ಚರಿತ್ರೆ ಅಧ್ಯಯನಕ್ಕೆ ನೆರವಾಗುತ್ತವೆ. ಅದೇ ರೀತಿ ಜಾತ್ರೆ, ಉತ್ಸವ, ಯಾತ್ರಾ ಸ್ಥಳಗಳು, ಕೆರೆ ಕಾಲುವೆಗಳು ಐತಿಹಾಸಿಕ ಕಟ್ಟಡ, ಶಿಲ್ಪ, ನಿವೇಶನ, ಆಯುಧ, ಸ್ಮಾರಕಗಳು ಸ್ಥಳೀಯ ಚರಿತ್ರೆ ಅಧ್ಯಯನ ಮಾಡುವುದಕ್ಕೆ ನೆರವಾಗುತ್ತವೆ.

ಸೊಂಡೂರು ಸಂಸ್ಥಾನಿಕರ ಚಾರಿತ್ರಿಕ ಅಧ್ಯಯನ ಎಂಬ ವಿಷಯ, ಸ್ಥಳೀಯ ಚರಿತ್ರೆ ಆಗಿದ್ದು ಈ ಅಧ್ಯಯನಕ್ಕೆ ಆಕರಗಳು ತುಂಬಾ ಮುಖ್ಯ. ಈ ಸಂಶೋಧನೆಗೆ ಪ್ರಾಥಮಿಕ ಆಕರಗಳಾದ ಶಾಸನ, ನಾಣ್ಯ ದೇವಾಲಯ, ಅರಮನೆ, ವಾಸ್ತುಶಿಲ್ಪ, ಸಮಕಾಲೀನ ದಾಖಲೆ, ದಿನಚರಿಗಳನ್ನು ಬಳಸಿಕೊಳ್ಳಲಾಗುವುದು. ಹಾಗೂ ಅನುಷಂಗಿಕ ಆಕರಗಳಾದ ಲೇಖನಗಳು, ಕೃತಿಗಳು, ಕೈಫಿಯತ್ತುಗಳು, ವಂಶಾವಳಿ, ನಾಮೆ, ದಿನಪತ್ರಿಕೆಗಳನ್ನು ಕೂಡ ಬಳಸಿಕೊಳ್ಳಲಾಗಿದೆ.

ಸೊಂಡೂರು ಸಂಸ್ಥಾನಿಕರ ಅಧ್ಯಯನಕ್ಕೆ ಚಾರಿತ್ರಿಕ ವಿಧಾನ ಬಳಸಲಾಗಿದೆ. ಈಗಾಗಲೇ ಅಧ್ಯಯನ ಮಾಡಿದ ವಿದ್ವಾಂಸರು ಮತ್ತು ಸಂಶೋಧಕರ ಪ್ರಕಟಿತ ಲೇಖನಗಳು, ಕೃತಿಗಳನ್ನು ಸಂಗ್ರಹಿಸಿಕೊಂಡು ಇದುವರೆಗೆ ನಡೆದ ಹಾಗೂ ನಡೆಯಬೇಕಾದ ಅಧ್ಯಯನಗಳನ್ನು ಹಲವು ವಿದ್ವಾಂಸರೊಂದಿಗೆ ಚರ್ಚಿಸಿ ಪ್ರಸ್ತುತ ವಿಷಯವನ್ನು ಅಧ್ಯಯನ ಯೋಗ್ಯ ಎಂದು ಆಯ್ದುಕೊಳ್ಳಲಾಯಿತು. ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳ ಜೊತೆಗೆ ಮೌಖಿಕ ಆಕರಗಳು ಹಾಗೂ ಕ್ಷೇತ್ರ ಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗುವುದು. ಐತಿಹ್ಯ, ಕೋಟೆ, ಅರಮನೆ ಇತ್ಯಾದಿ ಆಕರಗಳನ್ನು ಪರಾಮರ್ಶಿಸಿ ಘೋರ್ಪಡೆ ಸಂಸ್ಥಾನಿಕರ ಮರೆಯಾದ ಚರಿತ್ರೆಯನ್ನು ಪುನಾರಚನೆ ಮಾಡಲು ಪ್ರಯತ್ನ ಮಾಡಲಾಗುವುದು.

## ಅಧ್ಯಯನದ ಸ್ವರೂಪ

ಸೊಂಡೂರು ಸಂಸ್ಥಾನಿಕರ ಬಗ್ಗೆ ಈಗಾಗಲೇ ಅಧ್ಯಯನ ಮಾಡಿದ ವಿದ್ವಾಂಸರು ಮತ್ತು ಸಂಶೋಧಕರ ಪ್ರಕಟಿತ ಲೇಖನಗಳು, ಕೃತಿಗಳನ್ನು ಅವಲೋಕಿಸಲಾಗುವುದು. ಜೊತೆಗೆ ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮೌಖಿಕ ಆಕರಗಳು ಹಾಗೂ ಪುರಾತತ್ವಿಯ ಆಕರಗಳನ್ನು ತೌಲನಿಕವಾಗಿ ಬಳಸಿಕೊಂಡು ಅಧ್ಯಯನ ಮಾಡಲಾಗುವುದು. ಪ್ರಸ್ತುತ ಸಂಪ್ರಬಂಧದಲ್ಲಿ ಆರು ಅಧ್ಯಾಯಗಳನ್ನು ಮಾಡಲಾಗಿದೆ.

ಮೊದಲನೆ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ, ವ್ಯಾಪ್ತಿ, ಅಧ್ಯಯನದ ವಿಧಾನ, ಸ್ವರೂಪವನ್ನು ಕುರಿತು ಸಮೀಕ್ಷಿಸಲಾಗಿದೆ.

ಎರಡನೆ ಅಧ್ಯಾಯದಲ್ಲಿ ಸೊಂಡೂರು ಸಂಸ್ಥಾನಿಕರ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ಕುರಿತು ಅಧ್ಯಯನ ಮಾಡಲಾಗುವುದು.

ಮೂರನೆ ಅಧ್ಯಯನದಲ್ಲಿ ಸೊಂಡೂರು ಸಂಸ್ಥಾನಿಕರ ಮೂಲ, ಆಳ್ವಿಕೆಯ ಸ್ವರೂಪ, ಪ್ರಮುಖ ಸಂಸ್ಥಾನಿಕರನ್ನು ಕುರಿತು ಚರ್ಚಿಸಲಾಗುವುದು.

ನಾಲ್ಕನೆ ಅಧ್ಯಾಯದಲ್ಲಿ ಸೊಂಡೂರು ಸಂಸ್ಥಾನಿಕರು ಹೈದರಾಲಿ, ಟಿಪ್ಪುಸುಲ್ತಾನ ಮತ್ತು ಬ್ರಿಟಿಷರ ಜೊತೆ ರಾಜಕೀಯ ಸಂಬಂಧಗಳು, ಸೊಂಡೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣ ಚಳುವಳಿ ಹಾಗೂ ಮೈಸೂರು ರಾಜ್ಯದಲ್ಲಿ ಸೊಂಡೂರು ಸಂಸ್ಥಾನದ ವಿಲೀನ ಕುರಿತು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಸೊಂಡೂರು ಸಂಸ್ಥಾನಿಕರ ಕೊಡುಗೆಗಳನ್ನು ಸಾಮಾಜಿಕ ಮತ್ತು ಆರ್ಥಿಕ ಜೀವನ, ಘೋರ್ಪಡೆ ಅರಮನೆ, ಕೃಷ್ಣಾನಗರದ ಕೋಟೆ, ಘೋರ್ಪಡೆ ವಂಶದವರ ಹೆಸರಿನಲ್ಲಿರುವ ಗ್ರಾಮಗಳು ಕುರಿತು ಅಧ್ಯಯನ ಮಾಡಲಾಗುತ್ತದೆ.

ಆರನೆಯ ಅಧ್ಯಾಯದಲ್ಲಿ ಸಮಾರೋಪವಾಗಿ ಅಧ್ಯಯನದ ಫಲಿತಗಳನ್ನು ವಿಶ್ಲೇಷಿಸಲಾಗುವುದು. ಅನುಬಂಧದಲ್ಲಿ ಆಧಾರ ಗ್ರಂಥಗಳು, ನಕ್ಷೆಗಳು, ಛಾಯಾಚಿತ್ರಗಳನ್ನು ಕೊಡಲಾಗುವುದು.

---

ಅಧ್ಯಾಯ - ಎರಡು

# ಸೊಂಡೂರು ಸಂಸ್ಥಾನದ ಪರಿಚಯ

### ಪೀಠಿಕೆ

ಬಳ್ಳಾರಿ ಜಿಲ್ಲೆಯು ಕನ್ನಡ ನಾಡಿನ ಪ್ರಸಿದ್ಧ ರಾಜ ಮನೆತನಗಳಾದ ಕದಂಬ, ಗಂಗ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚೂರಿ, ಸೇವುಣ ಇವರ ಆಳ್ವಿಕೆಯ ಪರಿಧಿಯ ಒಳಗೆ ಇತ್ತು. ಮುಂದೆ ವಿಜಯನಗರ ಸಾಮ್ರಾಜ್ಯದೊಳಗೆ ಬಂದಿತು. ಈ ಎಲ್ಲಾ ರಾಜಮನೆತನಗಳ ಪ್ರಭಾವಕ್ಕೆ ಒಳಗಾಗಿದ್ದ ಸೊಂಡೂರು ತನ್ನ ಸ್ಥಾನ ಸೌಂದರ್ಯದಿಂದ ಒಂದು ಮಹತ್ವದ ಸ್ಥಾನ ಕಂಡುಕೊಂಡಿತ್ತು.

ಸೊಂಡೂರು ಬಳ್ಳಾರಿ ಜಿಲ್ಲೆಯ ಅತಿ ಹೆಚ್ಚು ಮಳೆ ಬೀಳುವ ಪ್ರದೇಶವಾಗಿರುವುದರಿಂದ ಉತ್ತಮ ನೆಲ ಜಲ ಪಡೆದುಕೊಂಡಿದೆ. ಇಲ್ಲಿಯ ಬೆಟ್ಟಗಳು ಈ ಜಿಲ್ಲೆಯ ಭೌತಿಕ ಲಕ್ಷಣಗಳನ್ನು ಹೊಂದಿವೆ. ೧೮೮೭ರಲ್ಲಿ ಬ್ರಿಟಿಷ್ ಅಧಿಕಾರಿ ರಾಬರ್ಟ್ ಬ್ರೂಸ್ ಫೂಟನು ಸೊಂಡೂರನ್ನು ಈ ರೀತಿ ವರ್ಣಿಸಿದ್ದಾರೆ. "ಅಗಲ ಕಿರಿದಾದ ಅತಿ ಉದ್ದವಿರುವ ಕಣಿವೆಯಲ್ಲಿ ಎತ್ತರದ ಬೆಟ್ಟಗಳು ವಾಯುವ್ಯದಿಂದ ಆಗ್ನೇಯ ದಿಕ್ಕಿನವರೆಗೆ ಸಮಾನಾಂತರವಾಗಿವೆ. ಅವುಗಳಿಗೆ ಲಂಬವಾಗಿ ಒಂದು ಸಣ್ಣ ನದಿ ನಾರಿಹಳ್ಳ, ಮಧ್ಯದಲ್ಲಿ ಒಂದು ಊರು, ಎಂದು ಅಂದಿನ ಸೊಂಡರನ್ನು ಪರಿಚಯಿಸುತ್ತಾರೆ."[೧]

ಸೊಂಡೂರು ಬಳ್ಳಾರಿ ಜಿಲ್ಲೆಯ ಒಂದು ವಿಶಿಷ್ಟ ಪ್ರದೇಶವಾಗಿದೆ. ಮಲೆನಾಡು ಪುಟ್ಟ ಕಾಶ್ಮೀರಗಳ ರೀತಿಯಲ್ಲಿ ಬೆಟ್ಟಗಳಿಂದಾವೃತವಾದ ಸುಂದರನಾಡು. ಸಾಧಿನ ಮಹಿಮೆ, ನಿಸರ್ಗ ಸಂಪತ್ತು ಅಮೂಲ್ಯ ನೈಸರ್ಗಿಕ ಸಂಪನ್ಮೂಲಗಳು ಇವುಗಳಿಂದ ಕೂಡಿದ ಈ ಪ್ರದೇಶ ಬಳ್ಳಾರಿ ಜಿಲ್ಲೆಯ ಹೃದಯವೇ ಆಗಿದೆ. ತಾನು ಪಡೆದಿರುವ ಪ್ರಕೃತಿ ಸೌಂದರ್ಯದಿಂದ ಕರ್ನಾಟಕದಲ್ಲೇ ವಿಶೇಷ ಮಹತ್ವವನ್ನು ಪಡೆದಿದೆ. ಪೌರಾಣಿಕ ಐತಿಹಾಸಿಕ ಮಹತ್ವಗಳಿಂದ ಸ್ಥಾನಿಕ ಮೌಲ್ಯವನ್ನು ಹೆಚ್ಚಿಸಿಕೊಂಡಿದೆ.

ಸ್ಕಂದ ಪುರಾಣದಲ್ಲಿ ಉಲ್ಲೇಖವಾಗಿರುವಂತೆ ಸ್ಕಂದ ನಿರುವ ಪುರವಾದುದರಿಂದ "ಸ್ಕಂದಪುರ" ಎಂದೆನಿಸಿಕೊಂಡಿದೆ.[೨] ಇದರ ಪ್ರಾಚೀನತೆಯಲ್ಲಿ ಬರುತ್ತದೆ. ಆದರೆ ಸೊಂಡೂರು ಎಂಬ ಶಬ್ದದ ಮೂಲ ರೂಪ 'ಸಂದೂರು' ಆಗಿದ್ದು ಬೆಟ್ಟ ಗುಡ್ಡಗಳ ಸಂದುಗಳಲ್ಲಿರುವ ಊರು ಎಂಬ ಕಾರಣದಿಂದಲೇ ಇದು ಬಂದಿದೆ ಸಂದು+ಊರು=ಸಂದೂದು>ಸಂಡೂರು ಆಗಿದೆ. ಸಂದು ಎಂಬುದು ನಿರ್ದಿಷ್ಟ ಆಕೃತಿಮಾ, ಅದು ಈ ಊರಿನ ವಿಶೇಷತೆಯನ್ನು ತಿಳಿಸುತ್ತದೆ. ಇದು ಸಾಮಾನ್ಯ ವಾಚಕ 'ಸಂದೂರು' ಜನರ ಬಾಯಿ ಸಂಧಿನಲ್ಲಿ ಸಂಡೂರು ಆಗಿದೆ. ಈ ಸಂದೂರು>ಸಂಡೂರು>ಸ್ಕಂಡೂರು>ಸೊಂಡೂರು ಎಂದು ಗ್ರಾಮೀಣ ಜನರ ಉಚ್ಚಾರಣೆಯ ಸೌಲಭ್ಯ ಕಾಂಕ್ಷೆಯನ್ನು ಪಡೆದು ಈಗ ಸಂಡೂರು ಮತ್ತು ಸೊಂಡೂರು ಆಗಿ ಮಾತ್ರ ಬಳಕೆಯಾಗುತ್ತಿದೆ.[೩]

### ಭೌಗೋಳಿಕ ಹಿನ್ನಲೆ

ಸೊಂಡೂರು ಬಳ್ಳಾರಿ ಜಿಲ್ಲೆಯ ಮಧ್ಯಭಾಗದಲ್ಲಿದೆ. ಭೌಗೋಳಿಕವಾಗಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿದೆ. ಸೊಂಡೂರಿನ ಸುತ್ತಲೂ ಬೆಟ್ಟ ಗುಡ್ಡಗಳು ಆವರಿಸಿರುವ ಪ್ರದೇಶ. ಎತ್ತರವಾದ ಬೆಟ್ಟಗಳು ಕೋಟೆಯಂತೆ ರಕ್ಷಣೆ ನೀಡಿವೆ. ಸುತ್ತಲೂ ಸಣ್ಣಸಣ್ಣ ಝುರಿ ಹಳ್ಳಗಳಿಂದ ಕೂಡಿದ ನೀರಿನ ನೆಲೆಗಳು ಫಸಲು ಕೊಡುವ ಭೂ ಭಾಗಗಳು ಇತಿಹಾಸ ಕಾಲದಿಂದಲೂ ಪ್ರಾಣಿಗಳಿಗೆ ಮಾನವನಿಗೆ ಅನುಕೂಲತೆಯಾಗಿದೆ.

೮೨ ಗ್ರಾಮಗಳನ್ನೊಳಗೊಂಡ ಈ ತಾಲ್ಲೂಕು ವಿವಿಧ ಬುಡಕಟ್ಟು ಮತ್ತು ಜನಾಂಗಗಳಿಗೆ ಸೇರಿದೆ. ೨೦೧೧-೧೨ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೧.೯೧.೮೫೪ ರಷ್ಟಿದೆ. ಭೌಗೋಳಿಕವಾಗಿ ೬೮.೩೫೬ ಹೆಕ್ಟೇರುಗಳಷ್ಟು ವಿಸ್ತಾರವಾಗಿದ್ದು ಇದರಲ್ಲಿ ೧೯೪೨೬ ಹೆಕ್ಟೇರ್‌ಗಳಷ್ಟು ಅರಣ್ಯ ಪ್ರದೇಶವನ್ನು ಹೊಂದಿದೆ. ಮಳೆ ಆಧಾರಿತ ಸಾಗುವಳಿ ಭೂಮಿ ೨೮.೨೯೦ ಹೆಕ್ಟೇರು ಇದ್ದು. ನೀರಾವರಿ ಸಾಗುವಳಿ ಭೂಮಿ ೬೦೦೦ ಹೆಕ್ಟೇರುಗಳಷ್ಟಿದೆ. ಇನ್ನು ಉಳಿದ ಪ್ರದೇಶ ಅರಣ್ಯಗಳಿಂದ ಮತ್ತು ಬೆಟ್ಟಗುಡ್ಡಗಳಿಂದ ಆವರಿಸಿದೆ. ಜೋಳ, ಸಜ್ಜೆ, ನವಣೆ, ರಾಗಿ, ಭತ್ತ, ಮುಂತಾದವುಗಳು ಹೆಚ್ಚಾಗಿ ಈ ಮಣ್ಣಿನಲ್ಲಿ ಬೆಳೆಯುವ ಪ್ರಮುಖ ಆಹಾರ ಬೆಳೆಗಳಾಗಿವೆ. ಜೊತೆಗೆ ಈರುಳ್ಳಿ, ಶೇಂಗಾ, ಸೂರ್ಯಕಾಂತಿ, ಮೆಕ್ಕೆಜೋಳ, ತರಕಾರಿ, ಮತ್ತಿತರ ವಾಣಿಜ್ಯ ಬೆಳೆಗಳನ್ನು ಕೂಡ ಬೆಳೆಯುತ್ತಾರೆ.

ಈ ಪ್ರದೇಶವು ಬಳ್ಳಾರಿ ಜಿಲ್ಲೆಯಲ್ಲಿ ಅತಿ ಹೆಚ್ಚು ಮಳೆ ಬೀಳುವ ಪ್ರದೇಶವಾಗಿದೆ. ಈ ಮಳೆಯಿಂದ ಸಣ್ಣ ಪುಟ್ಟ ಕೆರೆಗಳು ತುಂಬುತ್ತವೆ. ಈ ಪ್ರದೇಶದ ದರೋಜಿ ಕೆರೆ ಮುಖ್ಯವಾದುದು. ಈ ನೀರಿನ ಶೇಖರಣೆಂದ ಸುತ್ತಮುತ್ತಲಿನ ಭೂಮಿ ಮತ್ತು ಕೊಳವೆ ಬಾವಿಗಳಲ್ಲಿ ನೀರಿನ ಅಂತರ್‌ಜಲ ಪ್ರಮಾಣ ಹೆಚ್ಚಿದೆ. ಇವುಗಳಿಂದ ಕೃಷಿಗೆ ಅನುಕೂಲ ಆಗಿದೆ. ಒಟ್ಟಿನಲ್ಲಿ ಜನ, ಪ್ರಾಣಿ, ಪಕ್ಷಿ, ಉದ್ದಿಮೆಗಳಿಗೆ ಇಲ್ಲಿಯ ಜಲ ಸಂಪತ್ತು ವರದಾನವಾಗಿದೆ. ಆದರೆ ಮಳೆ ಮಾಪನ ಕೇಂದ್ರದ ಮಾಹಿತಿಯ ಪ್ರಕಾರ ವರ್ಷದಿಂದ ವರ್ಷಕ್ಕೆ ಮಳೆಯ ಪ್ರಮಾಣ ಇಲ್ಲಿ ಕಡಿಮೆಯಾಗುತ್ತ ಬಂದಿರುವುದನ್ನು ಕಾಣಬಹುದು ಇದಕ್ಕೆ ಇಲ್ಲಿನ ಪರಿಸರ ನಾಶ ಹಾಗೂ ಅಕ್ರಮ ಗಣಿಗಾರಿಕೆಯೆ ಕಾರಣವಾಗಿದೆ.

ನೈಸರ್ಗಿಕ ಸಂಪನ್ಮೂಲಗಳು ಈ ತಾಲ್ಲೂಕಿನ ಎಲ್ಲಾ ಪ್ರದೇಶಗಳಲ್ಲಿ ಸಮನಾಗಿ ಹಂಚಿಕೆಯಾಗಿಲ್ಲ. ಆದ್ದರಿಂದ ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರುಗಳು ಸೊಂಡೂರು ಪ್ರದೇಶದ ಪ್ರಮುಖ ಸಂಪತ್ತುಗಳಾಗಿವೆ. ಈ ಖನಿಜಗಳಿಂದಾಗಿ ಸೊಂಡೂರು ವಿಶ್ವ ವಿಖ್ಯಾತಿಗಳಿಸಿದೆ. ಇಲ್ಲಿ ಲೋಹ ಮತ್ತು ಲೋಹೇತರ ಖನಿಜಗಳು ದೊರೆಯುತ್ತವೆ.

ಇಲ್ಲಿ ಸಿಗುವ ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು ವಿದೇಶಗಳಿಗೆ ರಫ್ತಾಗುವುದರಿಂದ ಇದು ತಾಲ್ಲೂಕಿನ ಆರ್ಥಿಕ ಬೆಳವಣಿಗೆಗೆ ಸಹಕಾರಿಯಾಗಿದೆ.

ಮುಖ್ಯವಾಗಿ ಸೊಂಡೂರಿನ ಬೆಟ್ಟಗಳು ಶ್ರೀಮಂತ ಸಂಪನ್ಮೂಲ ಕೇಂದ್ರಗಳು. ಕಣಿವೆ ಕಂದರಗಳ ಮಧ್ಯೆಯೂ ಈ ನಗರ ತನ್ನ ಸುತ್ತಮುತ್ತಲೂ ಕಪ್ಪು ಬಂಗಾರದ ನಿಕ್ಷೇಪವನ್ನೇ ಹೊಂದಿದೆ. ೩೨೦೦ ರಿಂದ ೩೬೦೦ ಅಡಿಗಳೆತ್ತರದವರೆಗಿನ ಈ ನಿಧಿಗರ್ಭದ ಬೆಟ್ಟಗಳು ಸೊಂಡೂರನ್ನು ಆವರಿಸಿಕೊಂಡಿದೆ. ಪ್ರಮುಖವಾಗಿ ಸಮುದ್ರ ಮಟ್ಟದಿಂದ ೩೪೨೧ ಅಡಿ ಎತ್ತರದ ದೋಣಿ ಮಲೈ ಮತ್ತು ೩೬೦೦ ಅಡಿ ಎತ್ತರದ ಕುಮಾರ ಸ್ವಾಮಿ ಬೆಟ್ಟಗಳು ಸೊಂಡೂರು ಕೇಂದ್ರದ ಎರಡು ನಕ್ಷತ್ರಗಳಂತಿದೆ.

ಈ ಪ್ರದೇಶದಲ್ಲಿ ಕಂಡುಬರುವ ಬೆಟ್ಟ ಗುಡ್ಡಗಳ ಮತ್ತು ಅರಣ್ಯ ಪ್ರದೇಶಗಳಲ್ಲಿ ನಾನಾ ತರಹದ ಗಿಡಮರಗಳು ಕಂಡುಬರುತ್ತವೆ. ಬೆಟ್ಟ ಗುಡ್ಡಗಳು ಮತ್ತು ಅರಣ್ಯವನ್ನು ಹೊರೆತು ಪಡಿಸಿ ಉಳಿದ ಭಾಗಗಳಲ್ಲಿ ಗಿಡಮರಗಳು ಕಡಿಮೆ ಇವೆ. ಸಾಮಾನ್ಯವಾಗಿ ಈ ಕಾಡಿನಲ್ಲಿ ಕಂಡುಬರುವ ಗಿಡಮರಗಳೆಂದರೆ ಹುಣಸೆ, ಬೇವು, ಬಿಳಿಜಾಲಿ, ಬಾಗೆ, ಬೀಟೆ, ಈಚಲು, ತೇಗ, ಕತ್ತಾಳೆ, ಮೊಸವಾಳೆ ಮರಗಳು ಹೆಚ್ಚಾಗಿ ಕಂಡು ಬರುತ್ತವೆ.

ತೇಗ, ಬೀಟೆ ಮುಂತಾದ ಮರಗಳನ್ನು ವಿಜಯನಗರೋತ್ತರ ಕಾಲದ ಅರಸರು ಹಾಗೂ ಜನಗಳು ಗೃಹ ಮತ್ತು ದೇವಾಲಯಗಳ ನಿರ್ಮಾಣಕ್ಕೆ ಉಳಿಸಿಕೊಂಡ ಉದಾಹರಣೆಗಳಿವೆ.

ಸೊಂಡೂರು ಪ್ರದೇಶದಲ್ಲಿ ವಿಸ್ತಾರದಿಂದ ಕೂಡಿದ ಅರಣ್ಯ ಪ್ರದೇಶಗಳಿದ್ದು ಹೆಚ್ಚು ಆಹಾರ ಹಾಗೂ ಹಿತಕರವಾದ ಹವಮಾನ ಇರುವುದರಿಂದ ಇಲ್ಲಿ ಹಲವಾರು ಜಾತಿಯ ಜೀವ ಸಂಕುಲಗಳನ್ನು ಕಾಣಬಹುದು. ಈ ಪ್ರದೇಶದಲ್ಲಿ ಕಂಡುಬರುವ ಪ್ರಾಣಿಗಳೆಂದರೆ ಹುಲಿ, ಚಿರತೆ, ಕರಡಿ, ಮೊಲ, ಮಂಗ, ಕಾಡುಮಿಕ, ಮುಂತಾದ ಕಾಡು ಪ್ರಾಣಿಗಳಿವೆ. ಸಾಕು ಪ್ರಾಣಿಗಳಾದ ಎಮ್ಮೆ, ಹಸು, ಕುರಿ, ಆಡು ಕಂಡುಬರುತ್ತವೆ. ಜೊತೆಗೆ ಕೋಗಿಲೆ, ಗೂಬೆ, ಕೌಜುಗ, ಬಾವಲಿ, ಬೆಳ್ಳಕ್ಕಿ, ರತ್ನಪಕ್ಷಿ, ಗುಬ್ಬಿ, ಬೆಳವ, ನವಿಲು, ಪಾರಿವಾಳ ಮುಂತಾದ ಪಕ್ಷಿಗಳು ಇಲ್ಲಿವೆ.

ಪ್ರಸ್ತುತ ಅಭಿವೃದ್ಧಿಯ ನೆಪದಲ್ಲಿ ನೈಸರ್ಗಿಕ ಸಂಪನ್ಮೂಲಗಳನ್ನು ಹೆಚ್ಚು ಹೆಚ್ಚು ಲೂಟಿ ಮಾಡುತ್ತಿದ್ದಾರೆ. ಆದ್ದರಿಂದ ಸೊಂಡೂರಿನ ಪರಿಸರ ಕಲುಷಿತಗೊಳ್ಳುತ್ತಿದೆ. ಇದರಿಂದ ಇಲ್ಲಿಯ ಜೀವ ಸಂಕುಲಗಳು ಅಳಿವಿನಂಚಿನಲ್ಲಿವೆ. ವಾಯುಮಾಲಿನ್ಯ, ಜಲ ಮಾಲಿನ್ಯ, ತಾಪಮಾನದ ಏರಿಕೆ, ಇಂಗಾಲದ ಡೈ ಆಕ್ಸೈಡ್‌ನ ಪ್ರಮಾಣ ಅಧಿಕಗೊಳ್ಳುವುದರಿಂದ ಭೀಕರ ರೋಗಗಳು ಕಂಡು ಬರುತ್ತಿವೆ.

ಆಧುನಿಕ ಜೀವನ ಶೈಲಿಯಿಂದಾಗಿ ಮನುಷ್ಯ ಐಹಿಕ ಸಂಪತ್ತುಗಳ ಕಡೆಗೆ ಹೆಚ್ಚು ಆಸಕ್ತಿ ಬೆಳಸಿಕೊಳ್ಳುತ್ತಿದ್ದಾನೆ. ಇದರಿಂದ ತನ್ನ ಸುಖದ ಆಸೆಗಾಗಿ ಪ್ರಕೃತಿಯ ಸಮತೋಲನವನ್ನು ಹಾಳು ಮಾಡುತ್ತಿದ್ದಾನೆ. ಇದರಿಂದ ಅಪಾರ ಜೀವ ಸಂಕುಲಕ್ಕೆ ಮತ್ತು ತನ್ನ ಅವಸಾನಕ್ಕೆ ತಾನೆ ಕಾರಣನಾಗುತ್ತಿದ್ದಾನೆ. ಇಂತಹ ಅಪಾಯವನ್ನು ತಪ್ಪಿಸಬೇಕು ನಿಸರ್ಗದ ಯಥಾಸ್ಥಿತಿಯನ್ನು ಅದರ ಸಮತೋಲನವನ್ನು ಕಾಪಾಡಬೇಕಿದೆ. ಇಲ್ಲದಿದ್ದರೆ ಮುಂದಿನ ಪೀಳಿಗೆಯು ಇಲ್ಲಿ ಬದುಕಲು ಕಷ್ಟವಾಗುತ್ತದೆ.

## ಚಾರಿತ್ರಿಕ ಹಿನ್ನಲೆ

ಮಾನವ ದಾಖಲೆಗಳನ್ನು ಸೃಷ್ಟಿಸಿ ಕೊಳ್ಳುವ ಮೊದಲು ಅವನ ಜೀವನದ ರೀತಿ ನೀತಿಗಳಲ್ಲಿ ಕಂಡುಬರದೆ ಇದ್ದ ಕಾಲವನ್ನು ಪ್ರಾಗೈತಿಹಾಸಿಕ ಕಾಲವೆಂದು ಕರೆಯುತ್ತೇವೆ. ಸೊಂಡೂರು ಪರಿಸರದ ವ್ಯಾಪ್ತಿಯಲ್ಲಿ ಹಲವಾರು ಪ್ರಾಗೈತಿಹಾಸಿಕ ನೆಲೆಗಳು ಕಂಡುಬಂದಿದ್ದು ಮನುಷ್ಯ ಉಪಯೋಗಿಸಿ ಬಿಟ್ಟು ಹೋದ ಕೇಲವು ಅವಶೇಷಗಳು ದೊರಕಿವೆ. ಈ ಪರಿಸರದಲ್ಲಿ ಹಲವು ರಾಜಮನೆತನಗಳು ಆಳ್ವಿಕೆ ನಡೆಸಿದ್ದಾರೆ.ಇವರು ತಮ್ಮ ಆಡಳಿತಾವಧಿಯಲ್ಲಿ ಹಲವಾರು ಪ್ರಜಾಹಿತ ಕೆಲಸ ಕಾರ್ಯಗಳನ್ನು ಮಾಡಿದ್ದಾರೆ. ಈ ಚರಿತ್ರೆಯಲ್ಲಿ ತಮ್ಮದೇ ಆದ ವಿಶೇಷ ಸ್ಥಾನಮಾನಗಳ್ನು ಗಳಿಸಿಕೊಂಡಿದ್ದಾರೆ.

ಪ್ರಾಚೀನ ಶಿಲಾಯುಗ, ನೂತನ ಶಿಲಾಯುಗ, ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಹಲವಾರು ನೆಲೆಗಳನ್ನು ಪತ್ತೆ ಹಚ್ಚಲಾಗಿದೆ. ರಾಬರ್ಟ್ ಬ್ರೂಸ್‌ಫೂಟ್, ಕೆ.ಆರ್.ಯು.ಟೌಡಂ, ಮಾರ್ಟಿಮರ್ ವಿಲ್ಹರ್ ಮುಂತಾದ ಪಾಶ್ಚಾತ್ಯ ಸಂಶೋಧಕರು ಮತ್ತು ಸಂಪತ್ ಅಯ್ಯಂಗಾರ್, ಡಾ.ಎಂ.ಎಚ್.ಕೃಷ್ಣ, ಡಾ.ಆ.ಸುಂದರ ಮುಂತಾದ ಭಾರತೀಯ ಸಂಶೋಧಕರು ಹಲವಾರು ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ.[೪]

ಸೊಂಡೂರು ತಾಲ್ಲೂಕಿನ ದರೋಜಿ, ಜೋಗ, ಕುರೆಕುಪ್ಪೆ, ಬೆಟ್ಟಗಳು, ರಾಜಾಪುರ, ಮಲ್ಲಾಪುರ, ತೋರಣಗಲ್ಲು, ಅಪ್ಪಳಾಲೆಗುಡ್ಡ ಮುಂತಾದ ಪ್ರಮುಖ ಪ್ರದೇಶಗಳಲ್ಲಿ ಈ ಕಾಲಕ್ಕೆ ಸಂಬಂಧಿಸಿದ ಕೆಲವು ಅವಶೇಷಗಳು ಪತ್ತೆಯಾಗಿರುವುದು ಕಂಡು ಬರುತ್ತವೆ. ಬೂದಿದಿಬ್ಬಗಳು, ಶಿಲೋಪಕರಣಗಳು ಉಜ್ಜಿ ನಯಗೊಳಿಸಿರುವ ಕೊಡಲಿಯ ತುಂಡೊಂದು ಹಾಗೂ ಮಡಕೆಯ ಭಾಗ ದೊರೆತಿದೆ.[೫]

## ಪೂರ್ವ ಶಿಲಾಯುಗ

ಪೂರ್ವ ಶಿಲಾಯುಗದ ಕಾಲದಲ್ಲಿ ಮಾನವ ಶಿಲಾಯುಧಗಳನ್ನು ಬಳಸುತ್ತಿದ್ದನು. ಆಹಾರವನ್ನು ಯಾವ ರೀತಿ ಪಡೆಯುತ್ತಿದ್ದಾನೋ ಅದೇ ರೀತಿ ಬಳಸುತ್ತಿದ್ದಾನೆ ವಿನಃ ಅದನ್ನು ತನ್ನ ಅವಶ್ಯಕತೆಗೆ ತಕ್ಕಂತೆ ಸಿದ್ಧಪಡಿಸಿಕೊಳ್ಳುತ್ತಿರಲಿಲ್ಲ. ಪ್ರಾಣಿಗಳ ಚರ್ಮ ಅಥವಾ ತೊಗಟೆಯನ್ನು ಉಡುಪನ್ನಾಗಿ ಮಾಡಿಕೊಂಡಿದ್ದನು. ಹೆಚ್ಚು ಕಡಿಮೆ ಅವನ ಜೀವನ ಪ್ರಾಣಿಗಳ ರೀತಿಯಲ್ಲಿತ್ತು.

ಪೂರ್ವ ಶಿಲಾಯುಗದ ಕಾಲದ ನೆಲೆಗಳು ಮತ್ತು ಅವಶೇಷಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಹೊಂದಿದೆ ಎಂದು ೧೯೦೮ರ ಭಾರತದ ಇಂಪೀರಿಯಲ್ ಗಜೆಟಿಯರ್ ತಿಳಿಸುತ್ತದೆ. ಸೊಂಡೂರು ತಾಲ್ಲೂಕಿನ ದರೋಜಿ

ಜೋಗ ಕುರೆಕುಪ್ಪೆ ಬೆಟ್ಟಗಳು. ಈ ಸಂಸ್ಕೃತಿಯ ನೆಲೆಯಾಗಿದ್ದವು. ಈ ಪ್ರದೇಶದಲ್ಲಿ ಕೈಗೊಡಲಿ, ಸೀಳುಗತ್ತಿ, ಮಚ್ಚುಗತ್ತಿ, ಮೊದಲಾದ ಅವಶೇಷಗಳು ದೊರಕಿವೆ. ಈ ಶಿಲಾಯುಗದ ಅವಶೇಷಗಳು ಬೆಣಚು ಮತ್ತು ಹೆಮಟೈಟ್ ಶಿಲೆಗಳಿಂದ ಮಾಡಲಾಗಿದೆ.[೯] ಈ ಪ್ರದೇಶವು ದಟ್ಟವಾದ ಕಾಡು ಉತ್ತಮವಾದ ನೆಲ, ಜಲವನ್ನು ಹೊಂದಿದ್ದು. ಮಾನವನು ವಾಸಿಸಲು ಯೋಗ್ಯವಾದ ಪ್ರದೇಶವಾಗಿದ್ದರಿಂದ ಈ ಪರಿಸರದಲ್ಲಿ ಹಳೆಯ ಶಿಲಾಯುಗದ ಕಾಲದಿಂದಲೂ ಮಾನವನ ಅಸ್ತಿತ್ವವಿತ್ತೆಂದು ಸ್ಪಷ್ಟವಾಗುತ್ತದೆ.

**ಮಧ್ಯ ಶಿಲಾಯುಗ**

ನೂತನ ಶಿಲಾಯುಗ ಸಂಸ್ಕೃತಿಯ ನಂತರ ವಿಕಾಸಗೊಂಡ ಹಂತ ತಾಮ್ರ ಶಿಲಾಯುಗ, ಮಾನವನು ಕಲ್ಲಿಗೆ ಬದಲಾಗಿ ತಾಮ್ರವನ್ನು ಆಯುಧೋಪಕರಣಗಳನ್ನು ಮಾಡಲು ಬಳಸಲಾರಂಭಿಸಿದ್ದರಿಂದ ಈ ಕಾಲವನ್ನು ತಾಮ್ರ ಶಿಲಾಯುಗವೆಂದು ಕರೆಯಲಾಗಿದೆ.[೧೦]

ಸೊಂಡೂರು ತಾಲ್ಲೂಕಿನ ಲಕ್ಷ್ಮಿಪುರವು ತಾಮ್ರ ಶಿಲಾಯುಗದ ನೆಲೆಯಾಗಿದ್ದು. ದರೋಜಿಯಲ್ಲಿ ಈ ಸಂಸ್ಕೃತಿಯ ಬೂದಿ ದಿಬ್ಬ ದೊರೆತಿದೆ.[೧೧] ಭೈರನಾಯಕನ ಹಳ್ಳಿ, ರಾಜಾಪುರ ತಾಮ್ರ ಯುಗದ ನೆಲೆಯಾಗಿದ್ದರೂ ಈ ತಾಲ್ಲೂಕಿನಲ್ಲಿ ಯಾವುದೇ ಪ್ರದೇಶಗಳಲ್ಲಿ ತಾಮ್ರದ ಆಯುಧಗಳುಇದುವರೆಗೂ ದೊರಕಿಲ್ಲ.[೧೨]

**ಕಬ್ಬಿಣ ಯುಗ ಅಥವಾ ಬೃಹತ್ ಶಿಲಾಯುಗ**

ತಾಮ್ರ ಶಿಲಾಯುಗದ ಸಂಸ್ಕೃತಿಯ ನಂತರ ಈ ಪ್ರದೇಶದಲ್ಲಿ ಕಬ್ಬಿಣಯುಗ ಅಥವಾ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಕಂಡುಬರುತ್ತವೆ. ಈ ಕಾಲದಲ್ಲಿ ಮಾನವನು ಮೊದಲಬಾರಿಗೆ ಕಬ್ಬಿಣದ ಉಪಯೋಗವನ್ನು ಕಂಡುಕೊಳ್ಳುತ್ತಾನೆ. ಕಬ್ಬಿಣದ ಆಯುಧಗಳನ್ನು ಹಾಗೂ ಸಮಾಧಿಗಳ ರಚನೆಗೆ ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಿರುವುದರಿಂದ ಈ ಕಾಲದ ಸಂಸ್ಕೃತಿಯನ್ನು ಕಬ್ಬಿಣದ ಯುಗ ಅಥವಾ ಬೃಹತ್ ಶಿಲಾ ಸಂಸ್ಕೃತಿ ಎಂದು ಕರೆಯುತ್ತಾರೆ.[೧೩]

ಈ ತಾಲ್ಲೂಕಿನಲ್ಲಿ ರಾಜಾಪುರ, ಭೈರನಾಯಕನಹಳ್ಳಿ, ಸಿಡೇಗಲ್ಲು, ವಿಭೂತಿ ಗುಡ್ಡ, ತೋರಣಗಲ್ಲು, ಪ್ರಮುಖ ಪ್ರದೇಶಗಳು ಈ ಸಂಸ್ಕೃತಿಯ ನೆಲೆಗಳಾಗಿವೆ. ಈ ಲೋಹ ಸಂಸ್ಕೃತಿಯು ಕ್ರಿ.ಪೂ.೧೨೦೦ರಿಂದ ೨೦೦ರವರೆಗೆ ಅಸ್ತಿತ್ವದಲ್ಲಿತ್ತು ಎಂಬುದು ಸಂಶೋಧಕರ ಅನಿಸಿಕೆ. ಈ ಪ್ರದೇಶಗಳಲ್ಲಿ ಈ ಯುಗಕ್ಕೆ ಸಂಬಂಧಿಸಿದ ನೆಲೆಗಳಲ್ಲಿ ಕೆಲವು ಪ್ರಮುಖ ಅವಶೇಷಗಳ ಪತ್ತೆಯಾಗಿವೆ. ಅವುಗಳೆಂದರೆ ಶಿಲಾತೊಟ್ಟಿಗಳು, ಸಮಾಧಿ, ಗುಂಡುಗಳು, ಈಟಿ, ಭರ್ಜಿ, ಕತ್ತಿ, ಬಾಣದ ಮೊನೆಗಳು ಅಪಾರ ಸಂಖ್ಯೆಯಲ್ಲಿ ದೊರಕಿವೆ.

ಸೊಂಡೂರು ತಾಲ್ಲೂಕು ರಾಜಕೀಯವಾಗಿ ಅನೇಕ ರಾಜಮನೆತನಗಳ ಆಳ್ವಿಕೆಗೆ ಸೇರಿದ್ದು ಆ ಪ್ರದೇಶ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಕನ್ನಡ ನಾಡಿನ ಪ್ರಸಿದ್ಧ ಮನೆತನಗಳಾದ ಕದಂಬ, ಗಂಗ, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಕಲಚೂರಿ, ಸೇವುಣರು, ಪಾಂಡ್ಯ, ಹೀಗೆ

ಅನೇಕ ರಾಜಮನೆತನಗಳ ಒಂದಿಲ್ಲೊಂದು ರೀತಿಯ ಪ್ರಭಾವಕ್ಕೆ ಒಳಗಾಗಿತ್ತು. ಈ ಪ್ರದೇಶವು ಚಾಲುಕ್ಯ ಪೂರ್ವ ಯುಗದಿಂದ ವಿಜಯನಗರದ ಅರಸರುಗಳ ಕಾಲದವರೆಗೂ ಆಳಲ್ಪಟ್ಟಿತು.

**ಮೌರ್ಯರು**

ಕ್ರಿ.ಪೂ.೩ನೇ ಶತಮಾನದಲ್ಲಿ ಇವರು ಉತ್ತರಭಾರತದಲ್ಲಿ ಅಧಿಕಾರಕ್ಕೆ ಬಂದರು. ದಕ್ಷಿಣ ಭಾರತದವರೆಗೂ ಇವರ ರಾಜ್ಯ ವಿಸ್ತಾರವಾಗಿದೆ. ಸೊಂಡೂರಿನ ಗಡಿ ಪ್ರದೇಶಗಳಾದ ಕೊಪ್ಪಳ, ಗವಿಮಠ, ಮಸ್ಕಿ, ನಿಟ್ಟೂರು, ಅಶೋಕ ಸಿದ್ಧಾಪುರ, ಜಟಂಗಿ ರಾಮೇಶ್ವರ, ಬ್ರಹ್ಮಗಿರಿಗಳಲ್ಲಿ ಇವರ ಶಾಸನಗಳು ದೊರಕಿರುವುದರಿಂದ ಈ ಪ್ರದೇಶದ ನೇರೆ ಸೀಮೆಯಾದ ಸೊಂಡೂರು ಕೂಡ ಇವರ ಅಧಿಪತ್ಯದಲ್ಲಿ ಬರುತ್ತದೆ ಎಂದು ಮೌರ್ಯರ ಕಾಲದ ಅಶೋಕನ ಶಾಸನಗಳಿಂದ ನಮಗೆ ತಿಳಿದು ಬರುತ್ತದೆ.[೧೪]

**ನಂದರು**

ನಂದರು ಬಳ್ಳಾರಿ ಜಿಲ್ಲೆಯನ್ನು ಕ್ರಿ.ಪೂ.೪ನೇ ಶತಮಾನದಲ್ಲಿ ಆಳಿದ್ದರೆಂಬುದು ನಮಗೆ ಆಧಾರ ಸಿಗುತ್ತದೆ. ಕನ್ನಡದ ಪ್ರಾಚೀನ ಶಾಸನಗಳಿಂದ ಕುಂತಲ ನಾಡು ಎಂದು ಪ್ರಸಿದ್ಧಿ ಪಡೆದಿದ್ದ. ಈ ಕರ್ಾಟಕವನ್ನು ಆಳುತ್ತಿದುದ್ದಾಗಿದೆ ಉಲ್ಲೇಖ ಸಿಗುತ್ತದೆ. ಅಂದರೆ ಕುಂತಲ ನಾಡಿನ ಸುಮಾರು ಪ್ರದೇಶ ಇವರ ವಶದಲ್ಲಿತ್ತು ಎಂಬ ಶಿಕಾರಿಪುರದ ಶಾಸನದ ಆಧಾರದ ಮೇಲೆ ಬಳ್ಳಾರಿ ಈ ಜಿಲ್ಲೆಯ ಈ ಭಾಗ ಅದನ್ನೊಳಗೊಂಡಿರಬಹುದು ಎಂದು ಪರೋಕ್ಷ ಮಾಹಿತಿಯಿಂದ ಊಹಿಸಬಹುದಾಗಿದೆ.[೧೫]

**ಶಾತವಾಹನರು**

ದಕ್ಷಿಣ ಭಾರತವನ್ನಾಳಿದ ಶಾತವಾಹನರು ಸುಮಾರು ಕ್ರಿ.ಪೂ.೨೨೦ರಿಂದ ಕ್ರಿ.ಶ.೨೩೦ರವರೆಗೆ ರಾಜ್ಯವಾಳಿದ ಬಗ್ಗೆತಿಳಿದು ಬರುತ್ತದೆ. ಅಶೋಕನ ಶಾಸನಗಳ ಇವರನ್ನು ಆಂಧ್ರ ಭೃತ್ಯರು ಎಂದು ಉಲ್ಲೇಖಿಸಿವೆ. ಭೃತ್ಯ ಎಂಬ ಪದಕ್ಕೆ ಸಾಮಾನ್ಯವಾಗಿ ಸೇವಕ ಎಂಬ ಅರ್ಥವಿದ್ದರೂ ಇಲ್ಲಿ ಅಧೀನರು ಎಂದು ಪರಿಗಣಿಸುವುದು ಸೂಕ್ತವಾಗಿದೆ. ಅಂದರೆ ಆಂಧ್ರ ರಾಜರುಗಳಿಗೆ ಕೆಲಕಾಲ ಇವರು ಸಾಮಂತರಾಗಿದ್ದರೆಂಬುದು ನಮಗೆ ತಿಳಿದು ಬರುತ್ತವೆ. ಮೌರ್ಯರ ಪತನ ನಂತರ ಸ್ವತಂತ್ರ ಅರಸರಾದರೆಂದು ತಿಳಿದುಬರುತ್ತದೆ.[೧೬]

ಅಧಿಕಾರಕ್ಕೆ ಬಂದ ಶಾತವಾಹನರು ಇವರ ಕಾಲದಿಂದಲೇ ಈಗಿರುವ ಕುಮಾರ ಸ್ವಾಮಿ ಬೆಟ್ಟದ ಪಾರ್ವತಿ ದೇವಾಲಯ ಅಭಿವೃದ್ಧಿ ಹೊಂದಿದೆ. ಕುಮಾರ ಸ್ವಾಮಿ ಬೆಟ್ಟ ಇವರ ಶಕ್ತಿಕೇಂದ್ರವಾಗಿತ್ತು.

ಸೊಂಡೂರು ತಾಲ್ಲೂಕಿನ ದೇವಗಿರಿ, ಚೊರನೂರು, ಅಗರಹಾರ ಗೆಣತಿಕಟ್ಟೆ ಮುಂತಾದ ಗ್ರಾಮಗಳಲ್ಲಿ ಶಾತವಾಹನರ ಕಾಲದ ಅವಶೇಷಗಳು ದೊರೆಯುತ್ತವೆ. ಆದ್ದರಿಂದ ಸೊಂಡೂರು ಸಹ ಶಾತವಾಹನರ ಕಾಲದ ಪ್ರಮುಖ ಪಟ್ಟಣವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.[೧೭]

## ಕದಂಬರು

ಕ್ರಿ.ಶ.೪ರಿಂದ ೬ನೇಯ ಶತಮಾನದವರೆಗೆ ಆಡಳಿತ ನಡೆಸಿದ ಬನವಾಸಿಯ ಕದಂಬರ ಅರಸು ಮನೆತನ ಈ ನಾಡಿಗೆ ಮಹತ್ವದ್ದು.[೧೮] ಬನವಾಸಿ ಕದಂಬರ ಕಾಲದಲ್ಲಿ ಸೊಂಡೂರು ಪ್ರದೇಶವು ಕದಂಬರ ಸಾಮಂತರಾದ ಉಚ್ಛಂಗಿ ದುರ್ಗದ ನೊಳಂಬರ ಆಡಳಿತಕ್ಕೊಳಪಟ್ಟ ಒಂದು ಪ್ರಮುಖ ಕೇಂದ್ರವಾಗಿತ್ತು.[೧೯] ಇವರ ರಾಜ್ಯವು ಪಶ್ಚಿಮ ತೀರದಿಂದ ಬಳ್ಳಾರಿಯವರೆಗೆ ಹಬ್ಬಿತು. ರವಿವರ್ಮನ ಗುಡ್ನಾಪುರ ಶಾಸನವು ಇವರ ಆಳ್ವಿಕೆಯ ಕೆಲವು ವಿವರಗಳನ್ನು ತಿಳಿಸುತ್ತದೆ.[೨೦] ಮಯೂರವರ್ಮ ತನ್ನ ಚಂದ್ರವಳ್ಳಿ ಶಾಸನದಲ್ಲಿ ಸತಹನಿ ರಾಷ್ಟ್ರದಲ್ಲಿನ ಸೇಂದ್ರಕ ವಿಷಯದವರೆಗೂ ಆಳಿದನೆಂಬ ಉಲ್ಲೇಖವಿದೆ. ಇದಕ್ಕೆ ಸಾಕ್ಷಿಯಾಗಿ ಉಚ್ಛಂಗಿಯಲ್ಲಿರುವ ಬೆಟ್ಟದ ಕೋಟೆಯ ಸ್ಮಾರಕವಾಗಿದೆ.[೨೧] ಬನವಾಸಿ ಕದಂಬರ ಕಾಲದಲ್ಲಿ ಕುಮಾರಸ್ವಾಮಿ ಬೆಟ್ಟದಲ್ಲಿ ಕೆಲ ದೇವಾಲಯಗಳನ್ನು ನಿರ್ಮಿಸಲಾಗಿದೆ. ಮತ್ತು ಕೆಲವು ಮೂರ್ತಿ ಶಿಲ್ಪಾವೇಷಗಳು. ಇಲ್ಲಿ ಕಂಡುಬರುವುದರಿಂದ ಬನವಾಸಿ ಕಂದಬರ ಸಾಮಂತರಾದ ಉಚ್ಛಂಗಿ ನೊಳಂಬರ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಿರಬಹುದಾಗಿದೆ. ಕದಂಬರು ಸಪ್ತ ಮಾತೃಕೆಯರ ಮತ್ತು ಕುಮಾರ ಸ್ವಾಮಿಯ ಆರಾಧಕರಾಗಿದ್ದರು. ಕುಮಾರ ಸ್ವಾಮಿ ಬೆಟ್ಟ ಅಂದಿಗಾಗಲೇ ಸ್ವಾಮಿಮಲೈ ಎಂದೆನಿಸಿಕೊಂಡಿತು.[೨೨]

## ಬಾದಾಮಿ ಚಾಲುಕ್ಯರು

ಬನವಾಸಿ ಕದಂಬರಿಂದ ಬಾದಾಮಿಯನ್ನು ವಶಪಡಿಸಿಕೊಂಡು ಅದನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನೆಡೆಸಿ ಮಾಡಿದ್ದಾರೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಕುಮಾರ ಸ್ವಾಮಿಯ ಆರಾಧನೆ ವಿಶೇಷವಾದ ಮಹತ್ವವನ್ನು ಪಡೆದು ಕೊಂಡಿತು. ಎಂಬುದಕ್ಕೆ ಸೊಂಡೂರಿನ ಕುಮಾರ ಸ್ವಾಮಿ ದೇವಾಲಯದ ಪಾರ್ವತಿ ದೇವಾಲಯದ ಶಾಸನ ಹಾಗೂ ಶಿಲ್ಪಗಳ ಆಧಾರದ ಮೇಲೆ ಹೇಳಬಹುದು.[೨೩]

ಕುಮಾರ ಸ್ವಾಮಿಯು ಚಾಲುಕ್ಯರ ಕಾಲದ ಯುದ್ಧ ದೇವರು ಆಗಿದ್ದರು, ಇವರ ಕಾಲದಲ್ಲಿ ಕಟ್ಟಿರಬಹುದಾದ ಪಾರ್ವತಿ ದೇವಸ್ಥಾನ ಕುಮಾರ ಸ್ವಾಮಿ ದೇವಾಲಯದ ಪಕ್ಕದಲ್ಲಿದೆ ಇದು ಇವರ ಶೈಲಿಯ ವಾಸ್ತು ಶಿಲ್ಪ ವಿಮಾನ ಶೈಲಿಯಲ್ಲಿದೆ. ದ್ವಾರ ಬಾಗಿಲ ಇಕ್ಕೆಲಗಳಲ್ಲಿ ಶಂಖ ಲಿಪಿಯ ಶಿಲಾಶಾಸನಗಳಿವೆ. ಬಳ್ಳಾರಿ ಜಿಲ್ಲೆಯಲ್ಲಿಯೆ ಪ್ರಾಚೀನವಾದ ಸುಂದರವಾದ ವಾಸ್ತು ಶಿಲ್ಪಗಳನ್ನೊಳಗೊಂಡಿರುವ ದೇವಾಲಯವಾಗಿದೆ.

ಚಾಲುಕ್ಯರು ಈ ಪ್ರದೇಶದಲ್ಲಿ ಹಲವಾರು ವರ್ಷಗಳವರೆಗೆ ಅಧಿಕಾರ ಸ್ಥಾಪಿಸಿದ್ದರು ಇವರ ಕಾಲದಲ್ಲಿ ರಚನೆಯಾದ ವಾಸ್ತು ಶಿಲ್ಪಗಳು ತುಂಬಾ ಕಡಿಮೆ ಎಂದು ಹೇಳಬಹುದು. ಪಾರ್ವತಿ ದೇವಾಲಯ ಮಾತ್ರ ಇವರ ಕಾಲದಲ್ಲಿ ರಚನೆಯಾದ ಪ್ರಮುಖ ಗುರುತಾಗಿದೆ.[೨೪]

## ಗಂಗರು

ಕನ್ನಡ ನಾಡನ್ನು ಸಾಹಿತ್ಯದಿಂದ ಶ್ರೀಮಂತಗೊಳಿಸಿದ ಗಂಗರು ಸೊಂಡೂರು ಪ್ರದೇಶದಲ್ಲಿ ಅಧಿಕಾರವನ್ನು ಸ್ಥಾಪಿಸಿದರು. ಗಂಗ ದೊರೆ ಇಮ್ಮಡಿ ನರಸಿಂಹ ನೊಳಂಬ ರಾಜ್ಯವನ್ನು ವಶಪಡಿಸಿಕೊಂಡು ರಾಜ್ಯ

ವಿಸ್ತರಿಸುತ್ತಾ ಬಂದ ಈತನ ಸೇನಾಧಿಪತಿ ಚಾವುಂಡರಾಯ ಉಚ್ಚಂಗಿ ದುರ್ಗವನ್ನು ವಶಪಡಿಸಿಕೊಂಡು ಪುನಃ ರಾಷ್ಟ್ರಕೂಟರ ದೊರೆ ಖೊಟ್ಟಿಗನಿಗೆ ರಾಜಧಾನಿ ಮಾನ್ಯಖೇಟವನ್ನು ಕೊಡಿಸಿ ಅದರಲ್ಲಿ ಸೊಂಡೂರು ಮಂಚಾಲೆಗಳನ್ನು ಸೇರಿಸಿದ ಆ ಕಾಲಕ್ಕಾಗಲೇ ಈ ಎರಡು ಕ್ಷೇತ್ರಗಳು ನಾಡಿನ ನಾನಾ ಭಾಗಗಳಿಂದ ಪ್ರವಾಸಿಗರನ್ನು ಆಕರ್ಷಿಸುವ ತೀರ್ಥ ಕ್ಷೇತ್ರಗಳೆನಿಸಿಕೊಂಡಿದ್ದವು.[೨೫]

## ರಾಷ್ಟ್ರಕೂಟರು

ರಾಷ್ಟ್ರಕೂಟರು ಈ ಪ್ರದೇಶದ ಅಧಿಕಾರವನ್ನು ಪಡೆದ ಮೇಲೆ ಕುಮಾರಸ್ವಾಮಿ ದೇವಾಲಯದ ಅಭಿವೃದ್ಧಿ ಗಮನಾರ್ಹವಾಗಿ ಬೆಳವಣಿಗೆಯಾಯಿತು. ಈ ಪ್ರದೇಶದ ಮೇಲೆ ರಾಷ್ಟ್ರಕೂಟರು ವಿಶೇಷ ಗಮನ ಹರಿಸಿ ಇಲ್ಲಿನ ಪಾರ್ವತಿ ದೇವಸ್ಥಾನಕ್ಕೆ ಹಾಗೂ ಪಕ್ಕದ ಕುಮಾರ ಸ್ವಾಮಿ ದೇಗುಲಗಳಿಗೆ ನಿರ್ವಹಣೆಗಾಗಿ ಅನೇಕ ರೀತಿಯ ದಾನಗಳನ್ನು ನೀಡಿರುವರು.

ಪಾರ್ವತಿ ದೇವಾಲಯದಲ್ಲಿರುವ ಇಮ್ಮಡಿ ಬಲ್ಲಾಳನ ಅವಧಿಯ ಕ್ರಿ.ಶ.೧೨೦೮ರ ಶಾಸನದಲ್ಲಿ ಅರಸರ ಆಜ್ಞೆಯಂತೆ ರಾಷ್ಟ್ರಕೂಟರ ಅರಸನಾದ ೩ನೇ ಕೃಷ್ಣನ ಅವಧಿಯಲ್ಲಿ ನೀಡಲಾಗಿದ್ದ ದಾನವು ನಿಂತು ಹೋಗಿದ್ದರಿಂದ ಅದನ್ನು ಬಲ್ಲಾಳನ ಮಂತ್ರಿ ಮಹಾ ದಂಡನಾಯಕನು ಸ್ಥಾನಿಕ ವಿಷ್ಣುಕರ ಬ್ರಹ್ಮಚಾರಿಗೆ ದತ್ತಿಯನ್ನು ನವೀಕರಿಸುತ್ತಾನೆ.[೨೬]

ಸೊಂಡೂರಿನ ಕಾರ್ತಿಕೆಯ ಸ್ವಾಮಿ ದೇವಾಲಯ ಮತ್ತು ಮಂಚಾಳೆಯ ಯಲ್ಲಮ್ಮ ದೇಗುಲ ರಾಷ್ಟ್ರಕೂಟರ ೩ನೇ ಕೃಷ್ಣನ ಬೇಡಿಕೆಯ ಮೇರೆಗೆ ಅವನ ಸಾಮಂತ ಅರಸ ಕನ್ನನು ಕ್ರಿ.ಶ.೯೬೩ರಲ್ಲಿ ದತ್ತಿ ಕೊಟ್ಟಿದ್ದನು ಎಂದು ಸೊಂಡೂರಿನ ಕುಮಾರಸ್ವಾಮಿ ಬೆಟ್ಟದ ಪಾರ್ವತಿ ದೇಗುಲದ ಶಾಸನದಿಂದ ತಿಳಿದುಬರುತ್ತದೆ.[೨೭]

ಈ ರಾಷ್ಟ್ರಕೂಟರ ಶಾಸನಗಳು ಸೊಂಡೂರಿನ ನೆರೆಯ ಪ್ರದೇಶಗಳಾದ ಕೊಳಗಲ್ಲು ಕುಡುತಿನಿಗಳಲ್ಲಿ ಕಂಡುಬರುತ್ತದೆ. ಇಂತಹ ಕೆಲವು ಆಧಾರಗಳಿಂದ ರಾಷ್ಟ್ರಕೂಟರು ಈ ಪ್ರದೇಶವನ್ನು ಆಳ್ವಿಕೆ ನಡೆಸಿದ್ದಾರೆ. ಜೊತೆಗೆ ಧರ್ಮ, ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹಕೊಟ್ಟರೆಂದು ಹೇಳಬಹುದಾಗಿದೆ.

## ಕುರುಗೋಡಿನ ಸಿಂಧರು

ಸಿಂಧರು ಸೊಂಡೂರು ಮತ್ತು ಬಳ್ಳಾರಿ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಆಳುತ್ತಿದ್ದರು ಎಂದು ಶಾಸನಗಳಿಂದ ತಿಳಿಯುತ್ತದೆ.

ಸಿರುಗುಪ್ಪ, ಹೊಸಪೇಟೆ, ಬಳ್ಳಾರಿ, ಸೊಂಡೂರು ತಾಲ್ಲೂಕುಗಳ ಹಾಗೂ ಆಂಧ್ರ ಪ್ರದೇಶದ ಅನಂತಪುರ ಮತ್ತು ಕರ್ನೂಲು ಜಿಲ್ಲೆಗಳ ಕೆಲವು ಗ್ರಾಮಗಳನ್ನೊಳಗೊಂಡ ಪ್ರದೇಶವನ್ನು ಶಾಸನಗಳಲ್ಲಿ ಸಿಂದವಾಡಿ ನಾಡು ಎಂದು ಕರೆಯಲಾಗಿದೆ. ಈ ಪ್ರದೇಶವನ್ನು ಬಹು ಹಿಂದನಿಂದ ಸಿಂದವಂಶದ ಅರಸರು ಇದಕ್ಕೆ ಈ ಹೆಸರು ಪ್ರಾಪ್ತವಾಗಿದೆ. ೩ನೇ ಬಲ್ಲಾಳ ಕ್ರಿ.ಶ.೧೨೦೮ರಲ್ಲಿ ಹಂಪೆಯ ಮಧುವನದಲ್ಲಿದ್ದು

ಆಳುತ್ತಿದ್ದುದನ್ನು ಸೊಂಡೂರಿನ ಶಾಸನ ತಿಳಿಸುತ್ತದೆ. ಮುಂದೆ ಈ ಸಿಂಧ ಮನೆತನದವರು ಏನಾದರೆಂಬುದು ತಿಳಿದು ಬರುವುದಿಲ್ಲ.[೨೮]

**ಕಲ್ಯಾಣ ಚಾಲುಕ್ಯರು**

ರಾಷ್ಟ್ರಕೂಟರ ನಂತರ ಅಧಿಕಾರಕ್ಕೆ ಬಂದ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಈ ಪ್ರದೇಶ ಸಂಪೂರ್ಣವಾಗಿ ಸೇರಿತ್ತು. ಇವರ ಸಾಮಂತರಾದ ಪಾಂಡ್ಯರು ಮಹಾಮಂಡಳೇಶ್ವರರಾಗಿ ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗಿ ದುರ್ಗದಿಂದ ನೊಳಂಬವಾಡಿ ೩೨೦೦೦ವನ್ನು ಆಳಿದರು.[೨೯]

ಕಲ್ಯಾಣ ಚಾಲುಕ್ಯರು ಕುಮಾರ ಸ್ವಾಮಿ ಆರಾಧನೆಯನ್ನು ಮುಂದುವರಿಸಿಕೊಂಡು ಬಂದರು. ಇವರ ಕಲಾದಲ್ಲಿ ಸೊಂಡೂರಿನ ಕುಮಾರಸ್ವಾಮಿ ದೇವಾಲಯಗಳನ್ನು ಪುನಃ ನಿರ್ಮಾಣ ಮಾಡಲಾಯಿತು.

**ಹೊಯ್ಸಳರು**

ಸೊಂಡೂರಿನ ಪರಿಸರದಲ್ಲಿ ಹೊಯ್ಸಳರು ಅಧಿಪತ್ಯವನ್ನು ಸ್ಥಾಪಿಸಿದ ಕೆಲವು ಪ್ರತೀತಿ ಕಂಡುಬರುತ್ತದೆ. ಕಲ್ಯಾಣದ ಚಾಲುಕ್ಯರ ನಂತರ ಅಧಿಕಾರಕ್ಕೆ ಬಂದ ಇವರು ೧೩೪೨ರವರೆಗೆ ಆಳ್ವಿಕೆ ನಡೆಸಿದರು. ಇವರು ಕ್ರಿ.ಶ.೧೧೩೫ರಲ್ಲಿ ಉಚ್ಚಂಗಿ ಕೋಟೆಯನ್ನು ಮುತ್ತಿ ನೊಳಂಬವಾಡಿ ೩೨೦೦೦ವನ್ನು ಒಳಗೊಂಡಂತೆ ತುಂಗಾಭದ್ರ ನದಿಯವರೆಗಿನ ಪ್ರದೇಶವನ್ನು ಆಕ್ರಮಿಸಿದರು.[೩೦]

ಕಾರ್ತಿಕೆಯ ತಪೋವನಾಧಿಪತಿ ವಿಷ್ಣುಕರ ಬ್ರಹ್ಮಚಾರಿಯ ಉಲ್ಲೇಖ ಕುಡುತಿನಿಯ ಶಾಸನದಲ್ಲಿಯೂ ಇದೆ. ಇವರ ಕಾಲದಲ್ಲಿ ಕಾರ್ತಿಕೆಯನ ಕ್ಷೇತ್ರ ಮತ್ತಷ್ಟು ಪ್ರಚಾರಕ್ಕೆಬಂತು. ಈ ಅನೇಕ ಆಧಾರಗಳಿಂದ ಹೊಯ್ಸಳ ಅರಸರು ಸೊಂಡೂರು ಪ್ರದೇಶದಲ್ಲಿ ಸಾಂಸ್ಕೃತಿಕ ಬೆಳವಣಿಗೆಗೆ ಉತ್ತಮ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ.

**ಕುಮ್ಮಟದ ನಾಯಕರು**

ಕನ್ನಡ ನಾಡಿನಲ್ಲಿ ಚಕ್ರವರ್ತಿಗಳ ಅಧೀನದಲ್ಲಿ ಸ್ಥಳೀಯ ಆಡಳಿತವನ್ನು ನಿರ್ವಹಿಸುತ್ತಿದ್ದ ಸಾಮಂತರು, ಸ್ಥಳೀಯ ಅರಸರು ಬಹುಮಟ್ಟಿಗೆ ಚಕ್ರವರ್ತಿಗಳ ಕೈಗೊಂಡ ರಾಜ್ಯ ವಿಸ್ತರಣಾ ಹಾಗೂ ಆಂತರಿಕ ಕಲಹಗಳನ್ನು ಶಮನಗೊಳಿಸುವ ಕಾರ್ಯಗಳಲ್ಲಿ ನೆರವಾಗಿ ರಾಜ್ಯದಲ್ಲಿ ಶಾಂತಿ ನೆಮ್ಮದಿಗಳನ್ನು ಕೈಗೊಳ್ಳಲು ಕಾರಣರಾಗಿದ್ದಾರೆ.

ಅದೇ ರೀತಿ ಕುಮ್ಮಟದ ನಾಯಕರೂ ಕೂಡ ಕರ್ನಾಟಕದ ಚರಿತ್ರೆಗೆ ವಿಶಿಷ್ಠವಾದ ಕೊಡುಗೆಯನ್ನು ನೀಡಿದ್ದಾರೆ. ಜೊತೆಗೆ ಸೊಂಡೂರು ತಾಲ್ಲೂಕಿನ ಚರಿತ್ರೆಯಲ್ಲಿಯೂ ತನ್ನದೇ ಆದ ಮಹತ್ವವನ್ನು ನೀಡಿದ್ದಾರೆ.

ಬಳ್ಳಾರಿ ಜಿಲ್ಲೆಯ ರಾಯದುರ್ಗ ಈಗ ಆಂಧ್ರಪ್ರದೇಶದಲ್ಲಿದೆ ನೆರೆಹೊರೆಯ ಪ್ರದೇಶವನ್ನು ಜನರು ಮಲೆ ಪ್ರಾಂತ್ಯ ಅಥವಾ ಮಲೆ ಪಂಕ್ತಿ ದೇಶವೆಂದು ಕರೆಯುತ್ತಿದ್ದರು.[೩೧] ಈ ಮಲೆ ಪಂಕ್ತಿ ದೇಶದ ತಿಪ್ಪಸಮುದ್ರ ಎಂಬ ಗ್ರಾಮದಲ್ಲಿ ಮುಮ್ಮಡಿ ಸಿಂಗೆ ನಾಯಕನು ಜನಿಸಿದನು ಈತನಿಗೆ ಮುಮ್ಮಡಿ ಎಂಬ

ಬಿರುದಿತ್ತು.[೨೨] ಈ ವಂಶದಲ್ಲಿ ಹಿಂದೆ ಇಮ್ಮಡಿ ಮತ್ತು ಮೊದಲನೆಯ ಸಿಂಗೆಯ ನಾಯಕನೆಂಬ ಪೂರ್ವಜರು ಆಡಳಿತ ನಡೆಸಿರಬೇಕೆಂದು ಕಂಡು ಬರುತ್ತದೆ.

ಸಿಂಗೆ ನಾಯಕನು ಬೇಡರ ಜಾತಿಯವರು. ಈತನ ಕುಲದೇವರು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಸಿದ್ದಾಪುರ ಬಳಿಯಿರುವ ಜಟಂಗಿರಾಮೇಶ್ವರ. ಈ ಮುಮ್ಮಡಿ ಸಿಂಗನು ನಾಡ ತಳವಾರನಾಗಿದ್ದನು.

ಮುಮ್ಮಡಿ ಸಿಂಗನು ಈ ವಂಶದ ಮೂಲ ಪುರುಷ ಕುಮ್ಮಟ ದುರ್ಗವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆಯನ್ನು ಪ್ರಾರಂಭಿಸಿದರು. ಪರಾಕ್ರಮಿಯಾಗಿದ್ದ ಮುಮ್ಮಡಿ ಸಿಂಗನು ತನ್ನ ಸಾಮ್ರಾಜ್ಯವನ್ನು ಹರಿಹರದವರೆಗಿನ ಚಿತ್ರದುರ್ಗ ಜಿಲ್ಲೆಯನ್ನೊಳಗೊಂಡಂತೆ ವಿಸ್ತರಿಸಿದ. ಮುಮ್ಮಡಿ ಸಿಂಗನು ಮೊದಲು ದೇವಗಿರಿಯಲ್ಲಿ ತನ್ನ ಆಳ್ವಿಕೆಯನ್ನು ಆರಂಭಿಸಿ ಸ್ವಲ್ಪ ಕಾಲದಲ್ಲಿಯೇ ನಿಡುಗಲ್ಲಿನ ಚೋಳ ಮಹರಾಜನಾದ ಮಲ್ಲಿ ದೇವನಿಂದ ಹನೆಯ ಕೋಟೆ ಮತ್ತು ಸುತ್ತಲು ೨೦ಹಳ್ಳಿಗಳ ರಾಜ್ಯವನ್ನು ಪಡೆದನೆಂದು ತಿಳಿದುಬರುತ್ತದೆ.[೨೩] ಕಾಲಾಂತರದಲ್ಲಿ ದೊರವದಿಯಲ್ಲಿ ಕುಮ್ಮಟ ದುರ್ಗವನ್ನು ವಶಪಡಿಸಿಕೊಳ್ಳುತ್ತಾನೆ. ೧೨೮೭ರ ಸಮಯದಲ್ಲಿ ಮುಮ್ಮಡಿ ಸಿಂಗನಿಗೆ ಕಮ್ಮಟದುರ್ಗ ರಾಜಧಾನಿಯಾಗಿತ್ತು. ಇಲ್ಲಿ ಕೋಟೆಗಳನ್ನು ಕಟ್ಟಿದ್ದಾನೆ.

ಮುಮ್ಮಡಿ ಸಿಂಗನಿಗೆ ಕಂಪಿಲ ರಾಯನೆಂಬ ಮಗನಿದ್ದನು. ಈತನು ಕ್ರಿ.ಶ.೧೩೦೦ ರಿಂದ ೧೩೨೭ರವರೆಗೆ ರಾಜ್ಯಾಡಳಿತ ಮಾಡುತ್ತಾನೆ.

ಸೊಂಡೂರು ತಾಲ್ಲೂಕಿನ ರಾಮಘಡದ ಕ್ರಿ.ಶ. ೧೩೨೩ರಲ್ಲಿ ವೀರಗಲ್ಲು ಶಾಸನವು ಹೊಯ್ಸಳರ ಮತ್ತು ಕುಮ್ಮಟ ಅರಸರ ಸಂಬಂಧವನ್ನು ಕುರಿತ ಮಹತ್ವದ ಬೆಳಕು ಚೆಲ್ಲುತ್ತದೆ. ಕಂಪಿಲನ ರಾಜಧಾನಿ ಕುಮ್ಮಟ ದುರ್ಗವಾಗಿದ್ದರೂ ಸೊಂಡೂರು, ಹೊಸಪೇಟೆ ಮಾರ್ಗ ಮಧ್ಯೆ ಹಬ್ಬಿರುವ ಬೆಟ್ಟದ ಮೇಲೆ ಮತ್ತೊಂದು ಭದ್ರವಾದ ಕೋಟೆಯನ್ನು ಕಟ್ಟಿ ಅದಕ್ಕೆ ಹೊಸಮಲೆ ದುರ್ಗವೆಂಬ ಹೆಸರನ್ನು ಇಡುತ್ತಾನೆ.[೨೪] ಇದರಿಂದ ನಮಗೆ ತಿಳಿದು ಬರುವುದೇನೆಂದರೆ ಕುಮ್ಮಟದುರ್ಗ ಮತ್ತು ಹೊಸಮಲೆದುರ್ಗಗಳು ಕಂಪಿಲರಾಯನ ರಾಜಧಾನಿಯಾಗಿತ್ತು. ಹೊಯ್ಸಳ ದೊರೆ ವೀರಬಲ್ಲಾಳ ಕಂಪಿಲ ರಾಯನೊಡನೆ ಯುದ್ಧಕ್ಕೆ ಬರುತ್ತಾನೆ. ಇದರಿಂದ ಕಂಪಿಲರಾಯನು ರಕ್ಷಣೆಯ ದೃಷ್ಟಿಯಿಂದ ಸೊಂಡೂರು ಅರಣ್ಯ ಪ್ರದೇಶದಲ್ಲಿ ಹೊಸಮಲೆ ದುರ್ಗ ಎಂಬ ಹೊಸ ಗಿರಿದುರ್ಗವನ್ನು ನಿರ್ಮಿಸುತ್ತಾನೆ.

ಸೆವುಣ ರಾಮಚಂದ್ರನ ಮರಣದ ನಂತರ ಕಂಪಿಲದೇವನು ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ, ಅನಂತಪುರ, ಧಾರವಾಡ, ಮತ್ತು ರಾಯಚೂರು ಜಿಲ್ಲೆಗಳನ್ನು ಒಳಗೊಂಡಂತೆ ತನ್ನ ರಾಜ್ಯವನ್ನು ವಿಸ್ತರಿಸಿದ.[೨೫]

ಇವನು ಅಲ್ಲಾವುದ್ದಿನ್ ಖಿಲ್ಜಿಯ ಸೇನಾನಿಯಾದ ಮಲಿಕ್‌ಕಾಫೂರ ೧೩೧೪ರಲ್ಲಿ ದಾಳಿಯನ್ನು ಎದುರಿಸಬೇಕಾಯಿತು. ಕ್ರಿ.ಶ. ೧೩೨೦ರಲ್ಲಿ ಮೂರನೆ ಬಲ್ಲಾಳನು ಕಂಪಿಲದೇವನನ್ನು ಸೋಲಿಸಿ ದೊರವಾದಿ

ಮತ್ತು ಕಂಪಿಲಿಗಳನ್ನು ವಶಪಡಿಸಿಕೊಂಡನೆಂದು ತಿಳಿದು ಬರುತ್ತದೆ. ಬಲ್ಲಾಳನನು ಕಂಪಿಲನನ್ನು ಸೋಲಿಸಿದರುಯಾವುದೇ ಪ್ರದೇಶಗಳನ್ನು ಪಡೆಯಲಾಗಲಿಲ್ಲವೆಂದು ಪಿ.ಬಿ.ದೇಸಾಯಿರವರ ಅಭಿಪ್ರಾಯವಾಗಿದೆ.

ಮತ್ತೊಂದೆಡೆ ಕುಮ್ಮಟರ, ಕಾಕತೀಯ ಪ್ರತಾಪರುದ್ರನ ಆಕ್ರಮಣವನ್ನು ಎದುರಿಸಬೇಕಾಯಿತು. ಕಂಪಿಲ ದೇವನು ದಕ್ಷಿಣ ಭಾರತದಲ್ಲಿ ಬೆಳೆಯುತ್ತಿದ್ದ ವಿದೇಶಿ ಶಕ್ತಿಯ ಪ್ರಬಲ ವಿರೋಧಿಯಾಗಿದ್ದನು.

ಕ್ರಿ.ಶ.೧೩೧೪-೧೫ರ ಮಲ್ಲಿಕಾ ಕಫೂರನ ದಂಡೆಯಾತ್ರೆಯು ಯಶಸ್ವಿಯಾಗಲಿಲ್ಲ. ನಂತರದ ಕಾಲದಲ್ಲಿ ಮಹಮ್ಮದ್ ಬಿನ್ ತುಗಲಕ್‌ನ ಅಧಿಕಾರಿಗಳ ಕಪ್ಪಕಾಣಿಕೆಯ ಬೇಡಿಕೆಯನ್ನು ತಿರಸ್ಕರಿಸಿದನು, ಅಲ್ಲಿಂದ ಮುಂದೆ ೧೦ ವರ್ಷಗಳಲ್ಲಿ ಈ ರಾಜ್ಯವು ಅಭಿವೃದ್ಧಿ ಸಾಧಿಸಿದರು, ಕೊನೆಗೆ ದೆಹಲಿಯ ಸುಲ್ತಾನರ ದಾಳಿಗೆ ಕುಮ್ಮಟ ದುರ್ಗ, ಹೊಸ ಮಲೆದುರ್ಗ, ದೊರವಡಿ ಕೋಟೆಗಳು ನೆಲಕಚ್ಚಿದವು.[೬]

ಕುಮಾರ ರಾಮ ಈ ವಂಶದ ಕೊನೆಯ ದೊರೆ ಈತನು ಇವನ ಮಲತಾಯಿ ರತ್ನಾಜಿಯ ಕುತಂತ್ರದಿಂದ ಮರಣ ಹೊಂದಿದನು. ಮಂತ್ರಿಯಾದ ಬೈಚಪ್ಪನಾಯಕನು ಜೀವ ಉಳಿಸುವ ಸಲುವಾಗಿ ಕುಮಾರ ರಾಮನಿಗೆ ಅಡಗಿಸಿಟ್ಟ ಸ್ಥಳಗಳ ಕುರಿತ ರಾಮಘುಡ ಮತ್ತು ಜಟಂಗರಾಮೇಶ್ವರ ಈ ಎರಡುಬೆಟ್ಟಗಳಲ್ಲಿ ಕುಮಾರ ರಾಮನ ವಿಷಯದ ಬಗ್ಗೆ ಮಾಹಿತಿ ಲಭ್ಯವಿದೆ. ರಾಮಘುಡದಲ್ಲಿ ಇಂದಿಗೂ ಕುಮಾರ ರಾಮನ ಕಾಲದಲ್ಲಿಯ ಕೋಟೆ ಕೊತ್ತಲ ಸ್ಮಾರಕ ಇತ್ಯಾದಿ ಸಾಮಾಗ್ರಿಗಳ ಲಭ್ಯವಿದೆ. ಆದ್ದರಿಂದ ಕುಮಾರ ರಾಮನಿಗೆ ಅಡಗಿಸಿಟ್ಟ ಬೆಟ್ಟ ರಾಮಘುಡವೆ ಆಗಿತ್ತು ಎಂದು ಹೇಳಬಹುದು. ಆದರೆ ಜಟಂಗ ರಾಮೇಶ್ವರದಲ್ಲಿ ಕುಮಾರ ರಾಮನ ಗರಡಿ ಮನೆಯನ್ನು ಕಾಣಬಹುದು.

ಒಟ್ಟಾರೆಯಾಗಿ ಹೇಳುವುದಾದರೆ ದೆಹಲಿ ಸುಲ್ತಾನನೊಡನೆ ರಾಜಿ ಸಂಧಾನ ಮಾಡಿಕೊಳ್ಳದೆ ತನ್ನ ಪ್ರಾಣವನ್ನು ಅರ್ಪಿಸಿದನು. ಜನತೆಯ ಪಾಲಿಗೆ ದೈವಾಂಶಸಂಭೂತನಾಗಿ ಗೋಚರಿಸಿದ.

### ವಿಜಯನಗರ ಕಾಲ

೧. ವಿಜಯನಗರದ ಸಾಮ್ರಾಜ್ಯಕ್ಕೆ ರಕ್ಷಣೆ ಗೋಡೆಯಂತೆ ಈ ಸೊಂಡೂರಿನ ಬೆಟ್ಟಗುಡ್ಡಗಳು ಇದ್ದವು. ಈ ಭಾಗದಿಂದ ವಿಜಯನಗರವನ್ನು ಪ್ರವೇಶಿಸಬಹುದಾಗಿದ್ದ ಶತೃಗಳಿಗೆ ಅಡ್ಡಿಯನ್ನುಂಟು ಮಾಡುತ್ತಿದ್ದವು. ವಿಜಯನಗರ ಸಾಮ್ರಾಜ್ಯದ ರಾಜರುಗಳ ಕಾಲದಲ್ಲಿ ಇದು ಒಂದು ವ್ಯಾಪಾರ ಕೇಂದ್ರವಾಗಿತ್ತು. ಇಲ್ಲಿನಮರ ಗಿಡ ಮತ್ತು ಕಬ್ಬಿಣದ ಅದಿರುಗಳಿಂದ ಇದೊಂದು ಉಗ್ರಾಣದಂತಿತ್ತು.

೨. ರಾಬರ್ಟ್ ಸಿವೆಲ್‌ರ ಊಹೆಯಂತೆ ಕೃಷ್ಣದೇವರಾಯನ ಕಾಲದಲ್ಲಿ ಇದೊಂದು ಸರೋವರ ನಿರ್ಮಾಣವಾಗಿರಬೇಕೆಂದು ತಿಳಿದುಬರುತ್ತದೆ.[೭]

೩. ವಿಜಯನಗರ ಸಾಮ್ರಾಜ್ಯ ಕರ್ನಾಟಕದ ಪ್ರಮುಖ ಸಾಮ್ರಾಜ್ಯಗಳಲ್ಲಿ ಅತಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಇಂತಹ ಸಾಮ್ರಾಜ್ಯದಲ್ಲಿ ಸೊಂಡೂರು ವಿಶೇಷ ಪಾತ್ರ ವಹಿಸುತ್ತಿತ್ತು. ಇವರ ಕಾಲದಲ್ಲಿ ಸೊಂಡೂರು ಪ್ರಮುಖ ಪಟ್ಟಣವಾಗಿತ್ತು.

ವಿಜಯನಗರದ ಬುಕ್ಕರಾಯನಿಗೆ ಸಂಬಂಧಿಸಿದ ೨ ಶಾಸನಗಳು ಸುತ್ತಮುತ್ತಲಿನ ಕೆಲವು ಗ್ರಾಮಗಳಲ್ಲಿ ಕಂಡುಬರುತ್ತವೆ.

ಸೊಂಡೂರು ಪಟ್ಟಣದ ಮಧ್ಯದಲ್ಲಿ ತಾರಕೇಶ್ವರ ದೇವಸ್ಥಾನದ ಬಳಿ ಕೃಷ್ಣದೇವರಾಯನ ೧೫೨೪ರ ಶಿಲಾಶಾಸನವಿದೆ. ರಾಮಘಡದಲ್ಲಿಯೂ ಕೃಷ್ಣದೇವರಾಯನ ಶಾಸನವಿದೆ. ಕುಮಾರ ರಾಮನ ಸ್ಮರಣೆಗಾಗಿ ಬೈಚಪ್ಪನಾಯಕ ಚಪ್ಪನಾಯಕ ಕಟ್ಟಿಸಿದ ಕುಮಾರರಾಮನ ದೇವಸ್ಥಾನವನ್ನು ಶ್ರೀಕೃಷ್ಣದೇವರಾಯ ದುರಸ್ತಿ ಮಾಡಿಸಿದನೆಂದು ತಿಳಿದು ಬರುತ್ತದೆ.[೨೨]

ಕ್ರಿ.೧೫೨೩ರ ಕುರೆಕುಪ್ಪೆಯ ಸಂಸ್ಕೃತ ಶಾಸನ ಮತ್ತು ಇನ್ನೊಂದು ಕನ್ನಡ ಶಾಸನಗಳಲ್ಲಿ ಕೃಷ್ಣದೇವರಾಯನ ಉಲ್ಲೇಖವಿದ್ದು ಹೆಗರಸನ ಮಗ ಬೆನಕರಸನು. ವಿರೂಪಾಕ್ಷ ದೇವಾಲಯವನ್ನು ಕಟ್ಟಿಸಿ ಊರಿಗೆ ಆನಂತ ಸೇತು ಎಂದು ಹೆಸರಿಸಿದ್ದುದನ್ನು ಉಲ್ಲೇಖಿಸಿದೆ. ಹಾಗೂ ಕುರೆಕುಪ್ಪ ಗ್ರಾಮದ ಬೆನಕರಸು ವಿರುಪಾಕ್ಷ ದೇವಾಲಯ, ಕಟ್ಟಿಸಿ ಬಸವಾ ದೀಕ್ಷಿತರ ಭೂಮಿಯನ್ನು ಕ್ರಮವಾಗಿ ಪಡೆದು ದೇವರ ಕಾರ್ಯಕ್ಕೆ ದತ್ತಿ ಬಿಡುತ್ತಾನೆ.[೨೩]

ತಿಮ್ಮಲಾಪುರ, ಪೋತಲಕಟ್ಟೆ ಮಗಿಮಾವಿನಹಳ್ಳಿ ಚಿಕ್ಕಕೆರೆ ಯಾಗಿನಹಳ್ಳಿ, ಹಾರುವನಹಳ್ಳಿ, ಸೊಂಡೂರು, ಚಿಲಕನಹಟ್ಟಿ ಮುಂತಾದ ಗ್ರಾಮಗಳಲ್ಲಿನ ಶಾಸನಗಳು ತಿಳಿಸುವಂತೆ ಅಚ್ಚುತರಾಯನ ಕೈ ಕೆಳಗೆ ಅಧಿಕಾರಿಯಾಗಿದ್ದ ಬಯಕಾರ ರಾಮಪ್ಪಯ್ಯನ ತನ್ನ ತಂದೆ ತಿಮ್ಮರಾಯ ತಾಯಿ ಹಿರಿಯ ಲಕ್ಕರಸಮ್ಮ ಮಗ ಶಿಂಗಾಲಯ್ಯ ಮುಂತಾದವರಿಗೆ ಪುಣ್ಯವಾಗಬೇಕೆಂದು ಅನೇಕ ದೇವಾಲಯಗಳನ್ನು ಕಟ್ಟಿಸಿದನು.[೨೪]

ಇವರ ಕಾಲದಲ್ಲಿ ಸೊಂಡೂರು ಯುದ್ಧ ಸಾಮಾಗ್ರಿಗಳಾದ ಆಯುಧಗಳ ತಯಾರಿಕೆ ಮತ್ತು ಮಾರಾಟ ಕೇಂದ್ರವಾಗಿರಬಹುದು ಏಕೆಂದರೆ ಇಲ್ಲಿ ಅನೇಕ ಪ್ರದೇಶಗಳಲ್ಲಿ ಕುಲುಮೆಗಳಿದ್ದು, ಬೇಟ್ಟಗಳೋಪಾದಿಯಲ್ಲಿ ಬೂದಿ ತುಂಬಿದ ತಾಣಗಳಿವೆ. ಇವು ಕಬ್ಬಿಣ ತಯಾರಿಸುವ ಕೇಂದ್ರಗಳಾಗಿದ್ದು ಇಲ್ಲಿ ಹೆಚ್ಚು ಹುಲ್ಲುಗಾವಲು ಪ್ರದೇಶವಾಗಿದ್ದರಿಂದ ಕುದುರೆ,ಆನೆಗಳ ಸೈನ್ಯದ ವಿಶ್ರಾಂತಿ ತಾಣಗಳಿಗಿರುಹುದು, ಆಯುಧ ತಯಾರಿಕೆ ಕೇಂದ್ರಗಳು ಸೇನೆ ವಿಶ್ರಾಂತಿಗೆ ಯೋಗ್ಯ ಸ್ಥಳವಾಗಿದ್ದವು.[೨೫]

ಕ್ರಿ.ಶ.೧೫೬೫ರ ತಾಳಿಕೋಟೆ ರಕ್ಕಸತಂಗಡಗಿ ಯುದ್ಧದ ನಂತರ ಸಾಮ್ರಾಜ್ಯ ಪತನ ಹೊಂದಿತು ನಂತರ ಸೇನಾನಿಗಳು ಸಾಮಂತರು ಬೇರೆ ಬೇರೆ ಭಾಗಗಳನ್ನು ಸ್ವತಂತ್ರವಾಗಿ ಆಳಲು ಪ್ರಾರಂಭಿಸಿದರು. ಕೂಡ್ಲಿಗಿ ಸೊಂಡೂರು ಮತ್ತು ಉಜ್ಜನಿ ಪ್ರದೇಶ ಜರಿಮಲೆ ಪಾಳೇಗಾರರ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ.೧೭೨೮ರಲ್ಲಿ ಬಳ್ಳಾರಿಯ ಸುತ್ತಮುತ್ತಲಿನ ಪ್ರದೇಶ ವಿಜಾಪುರ ಸುಲ್ತಾನನಿಂದ ಶಿವಾಜಿ ವಶಪಡಿಸಿಕೊಂಡನು. ಮರಾಠರ ಮನೆತನದ ದಾಯಾದಿಗಳಾದ ಘೋರ್ಪಡೆಯವರು ೧೭೨೮ರಲ್ಲಿ ಸೊಂಡೂರನ್ನು ಜರಿಮಲೆ ಪಾಳೆಯಗಾರರಿಂದ ವಶಪಡಿಸಿಕೊಂಡರು ನಂತರ ೧೮೯೦ರಲ್ಲಿ ಬ್ರಿಟೀಷರೊಡನೆ ಒಪ್ಪಂದ ಮಾಡಿಕೊಂಡು ಕ್ರಿ.ಶ.೧೯೪೭ರ ವರೆಗೆ ರಾಜ ಪ್ರಭುತ್ವ ಮಾಡಿದರು.[೨೬]

ಹೀಗೆ ಸೊಂಡೂರು ಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ಇತಿಹಾಸ ರಚನೆ ಕಾಲದವರೆಗೆ ವಿವಿಧ ಅರಸು ಮನೆತನಗಳು ಆಳ್ವಿಕೆ ನಡೆಸಿರುವುದನ್ನು ಕಾಣಬಹುದು.

## ಕೊನೆ ಟಿಪ್ಪಣಿ

೦೧. ಸ್ಕಂದ ಶ್ರೀಗಂಧ, ಸ್ಮರಣ ಸಂಚಿಕೆ, ಸೊಂಡೂರು, ಒಂದು ಪರಿಚಯ, ಮೃತ್ಯುಂಜಯ ರುಮಾಲೆ, ಪುಟ-೪

೦೨. ಸೊಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ, ಗಿರಿಜಾ, ಪುಟ-೧೯

೦೩. ಸ್ಕಂದ ಶ್ರೀಗಂಧ, ಸ್ಮರಣ ಸಂಚಿಕೆ, ಸೊಂಡೂರು, ಒಂದು ಪರಿಚಯ, ಮೃತ್ಯುಂಜಯ ರುಮಾಲೆ, ಪುಟ-೪

೦೪. ಶಿಲ್ಪಕಲಾ ಪ್ರಪಂಚ, ಆರ್.ವೆಂಕಟೇಶ್ ಮೂರ್ತಿ, ಪುಟ-೯೮

೦೫. ಸೊಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ, ಗಿರಿಜಾ, ಪುಟ-೧೯

೦೬. ಹೊಸಪೇಟೆ ತಾಲ್ಲೂಕು ದರ್ಶನ, ಸಿ.ಮಹದೇವ, ಪುಟ-೬

೦೭. ಕರ್ನಾಟಕದ ಪುರಾತತ್ವ ನೆಲೆಗಳು, ಕೆ.ಬಿ.ಶಿವತಾರಕ್, ಪುಟ-೧೧

೦೮. ಪುರ್ವೋಕ್ತ, ಗಿರಿಜಾ, ಪುಟ-೧೯

೦೯. ಪುರ್ವೋಕ್ತ, ಕೆ.ಬಿ.ಶಿವತಾರಕ್, ಪುಟ-೩೬೨

೧೦. ಪೂರ್ವೋಕ್ತ, ಗಿರಿಜಾ, ಪುಟ-೨೧

೧೧. ಅದೇ, ಪುಟ-೨೧

೧೨. ಅದೇ, ಪುಟ-೨೧

೧೩. ಪೂರ್ವೋಕ್ತ, ಸಿ.ಮಹದೇವ, ಪುಟ-೧೦,೧೧

೧೪. ಪೂರ್ವೋಕ್ತ, ಮೃತ್ಯಂಜಯ ರುಮಾಲೆ, ಪುಟ-೫

೧೫. ಪ್ರಭು ಪ್ರಕಾಶನ, ನೆನಪಿನ ಸಂಚಿಕೆ, ಸೊಂಡರು, ಕೆಲವು ಐತಿಹಾಸಿಕ ಘಟನೆಗಳು, ಜೆ.ಎಂ.ನಾಗಯ್ಯ, ಪುಟ-೪೧,೪೨

೧೬. ಸೊಂಡೂರು ಪರಿಸರದ ಕಾರ್ತಿಕೇಯ ತಪೋವನ, ವಾಸು ದೇವ ಬಡಿಗೇರ, ಪುಟ-೯

೧೭. ಕರ್ನಾಟಕ ರಾಜ್ಯಗ್ಯಾಸೆಟಿಯರ್, ಭಾಗ-೧, ಸೂರ್ಯನಾಥ ಯು. ಕಾಮತ್, ಪುಟ-೧೬೪,೧೬೫

೧೮. ಪೂರ್ವೋಕ್ತ, ಪುಟ-೧೨,೧೩

೧೯. ಪ್ರಾಚೀನ ಕರ್ನಾಟಕದ ಆಡಳಿತದ ವಿಭಾಗಗಳು, ಎನ್.ಎಸ್.ರಾಮಪ್ರಸಾದ್, ಪುಟ-೬

೨೦. ಸೊಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ, ಎಂ.ಎನ್.ನಾಗಭೂಷಣ್, ಪುಟ-೧೭೭

೨೧. ಪೂರ್ವೋಕ್ತ, ಸಿ.ಮಹದೇವ, ಪುಟ-೧೪

೨೨. ಅದೇ, ಪುಟ-೧೪

೨೩. ಬಳ್ಳಾರಿ ಜಿಲ್ಲೆ ಸಾಂಸ್ಕೃತಿಕ ದರ್ಶನ, (ಸಂ.ಲೇ) ಕುಂಬಾಸ, ಪುಟ-೮

೨೪. ಪೂರ್ವೋಕ್ತ, ಎನ್.ಎಂ.ನಾಗಭೂಷಣ್, ಪುಟ-೧೭೭

೨೫. ಪೂರ್ವೋಕ್ತ, ವಾಸುದೇವ ಬಡಿಗೇರ, ಪುಟ-೧೦

೨೬. ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ-೧, ಸೊಂಡೂರು ಶಾಸನ ಸಂಪುಟ-೭, ಕ್ರಿ.ಶ.೧೨೦೬

೨೭. ಬಳ್ಳಾರಿ ಜಿಲ್ಲೆ ಸಾಂಸ್ಕೃತಿಕ ದರ್ಶನ, (ಸಂ.ಲೇ) ಕುಂಬಾಸ, ಪುಟ-೮

೨೮. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಜೆ.ಎಂ.ನಾಗಯ್ಯ, ಪುಟ-೩೩, ೩೪

೨೯. ಪೂರ್ವೋಕ್ತ, ಎನ್.ಎಂ.ನಾಗಭೂಷಣ್, ಪುಟ-೧೭೭

೩೦. ಪೂರ್ವೋಕ್ತ, ಸೂರ್ಯನಾಥ ಯು. ಕಾಮತ್, ಪುಟ-೨೦೯

೩೧. ಪುರ್ವೋಕ್ತ, ಗಿರಿಜಾ, ಪುಟ-೩೬

೩೨. ಅದೇ, ಪುಟ-೩೬

೩೩. ಹುಲ್ಲೂರು ಶ್ರೀನಿವಾಸ ಜೋಯಿಸ (ಸಂ.ಲೆ)., (ಸಂ) ಲಕ್ಷ್ಮಣ ತೆಲಗಾವಿ, ಪುಟ-೫೨೪

೩೪. ಪೂರ್ವೋಕ್ತ, ನಾಗಯ್ಯ ಜೆ.ಎಂ., ಪುಟ-೧೧೫

೩೫. ಪುರ್ವೋಕ್ತ, ಗಿರಿಜಾ, ಪುಟ-೪೩

೩೬. ಪೂರ್ವೋಕ್ತ, ಸೂರ್ಯನಾಥ ಯು.ಕಾಮತ್, ಪುಟ-೨೦೯

೩೭. ಪೂರ್ವೋಕ್ತ, ವಾಸುದೇವ ಬಡಿಗೇರ, ಪುಟ-೧೨

೩೮. ಪೂರ್ವೋಕ್ತ, ಕುಮಾರಿ ಗಿರಜಾ, ಪುಟ-೬

೩೯. ಅದೇ ಪುಟ-೭

೪೦. ಅದೇ ಪುಟ-೭

---

ಅಧ್ಯಾಯ - ಮೂರು

# ಸೊಂಡೂರು ಸಂಸ್ಥಾನಿಕರ ಆಳ್ವಿಕೆ

೩.೧. ಸಂಸ್ಥಾನದ ಹುಟ್ಟು ಮತ್ತು ಬೆಳವಣಿಗೆ

೩.೨. ಸೊಂಡೂರು ಸಂಸ್ಥಾನಿಕರ ಮೂಲ

೩.೩. ಪ್ರಮುಖ ಸಂಸ್ಥಾನಿಕರು

- ೩.೩.೧. ಸಿದ್ದೋಜಿರಾವ್ ಘೋರ್ಪಡೆ
- ೩.೩.೨. ಮುರಾರಿರಾವ್ ಘೋರ್ಪಡೆ
- ೩.೩.೩. ಯಶವಂತರಾವ್ ಹಿಂದೂರಾವ್ ಘೋರ್ಪಡೆ

ಅಧ್ಯಾಯ - ಮೂರು

# ಸೊಂಡೂರು ಸಂಸ್ಥಾನಿಕರ ಆಳ್ವಿಕೆ

ಕರ್ನಾಟಕ ಚರಿತ್ರೆಯಲ್ಲಿ ಬಳ್ಳಾರಿಗೆ ತನ್ನದೇ ಆದ ಒಂದು ವಿಶಿಷ್ಟವಾದ ಸ್ಥಾನವಿದೆ. ಈ ಜಿಲ್ಲೆಯ ವ್ಯಾಪ್ತಿಗೆ ಒಳಪಡುವ ಎಲ್ಲ ತಾಲ್ಲೂಕು ಕೇಂದ್ರಗಳಿಗೂ ಕೂಡ ತಮ್ಮದೇ ಆದ ಐತಿಹಾಸಿಕ ಹಿನ್ನೆಲೆ ಇರುವುದನ್ನು ಚರಿತ್ರೆಯ ಪುಟಗಳಿಂದ ತಿಳಿದುಕೊಳ್ಳಬಹುದು. ಈ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾದ ಸೊಂಡೂರು ಸಹ ಹಲವಾರು ಚಾರಿತ್ರಿಕ ಕಾರಣಗಳಿಂದ ಮಹತ್ವವನ್ನು ಪಡೆದುಕೊಂಡಿದೆ. ಈ ತಾಲ್ಲೂಕನ್ನು ಹಲವಾರು ರಾಜ ವಂಶಗಳು ಆಳಿದ್ದನ್ನು ಕಾಣುತ್ತೇವೆ. ಅವುಗಳಲ್ಲಿ ಪ್ರಮುಖವಾಗಿ ನಂದರು, ಮೌರ್ಯರು, ಗುಪ್ತರು, ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಪಾಂಡ್ಯರು, ಕಲ್ಯಾಣ ಚಾಲುಕ್ಯರು, ಕಲಚೂರರು, ಸೇವುಣರು, ಸಿಂಧರು, ಮತ್ತು ವಿಜಯನಗರ ಸಾಮ್ರಾಜ್ಯದ ಅರಸರು ಮೇಲಿನ ಎಲ್ಲಾ ಅರಸು ಮನೆತನಗಳ ಆಳ್ವಿಕೆಗೆ ಸೊಂಡೂರು ಪ್ರದೇಶ ಒಳಪಟ್ಟಿತ್ತು.[೧]

ಹಾಗೆಯೇ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಪೂರ್ವದಲ್ಲಿ ಸೊಂಡೂರಿಗೆ ಸಮೀಪವಿರುವ ಹೊಸ ಮಲೆದುರ್ಗ (ರಾಮನದುರ್ಗ, ರಾಮಘಡ)ವು ಕಂಪಿಲರಾಯ ಮತ್ತು ಆತನ ಮಗ ಕುಮಾರ ರಾಮನ ಆಳ್ವಿಕೆಗೆ ಒಳಪಟ್ಟಿತ್ತು. ದೆಹಲಿ ಸುಲ್ತಾನನೊಂದಿಗೆ ನಡೆದ ಯುದ್ಧದಲ್ಲಿ ಕುಮಾರರಾಮ ತನ್ನ ಪ್ರಾಣವನ್ನು ಕೊಡುತ್ತಾನೆ. ಜೊತೆಗೆ ಕಂಪಿಲರಾಯನು ಮರಣಿಸಿದನು.[೨] ಇದರಿಂದ ಕಂಪಿಲರಾಯನ ರಾಜ್ಯ ಪತನ ಹೊಂದಿತು ಮುಂದೆ ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರ ನೊಂಡೂರು ಪ್ರದೇಶವು ಇವರ ಆಳ್ವಿಕೆಗೆ ಒಳಪಟ್ಟಿತು. ವಿಜಯನಗರ ಸಾಮ್ರಾಜ್ಯಪತನಾ ನಂತರ ಪಾಳೆಯಗಾರರು ಮತ್ತು ಬಿಜಾಪುರ ಸುಲ್ತಾನರು ನಂತರ ಶಿವಾಜಿಯ ಆಳ್ವಿಕೆಗೆ ಒಳಪಟ್ಟಿತು.[೩]

ಶಿವಾಜಿಯ ನಂತರ ಈತನ ಸೇನಾನಿ ಸಂತಾಜಿ, ಘೋರ್ಪಡೆಯ ವಂಶಸ್ಥಾನದ ಸಿದ್ದೋಜಿರಾವ್ ಘೋರ್ಪಡೆಯವರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ.೧೭೭೫-೭೬ರಲ್ಲಿ ಸೊಂಡೂರು ಹೈದರಾಲಿಯ ಆಳ್ವಿಕೆಗೆ

ಒಳಪಟ್ಟಿತ್ತು. ೧೭೯೨ರಲ್ಲಿ ಟಿಪ್ಪು ಸುಲ್ತಾನನಿಗೂ ಮತ್ತು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಗೂ ನಡೆದ ಒಪ್ಪಂದದಂತೆ ಸೊಂಡೂರಿನ ಅಧಿಕಾರ ಪುನಃ ಘೋರ್ಪಡೆಯವರಿಗೆ ಲಭ್ಯವಾಯಿತು.[೪] ಹೀಗೆ ಸೊಂಡೂರು ಹಲವಾರು ಚಾರಿತ್ರಿಕ ಏಳುಬೀಳುಗಳನ್ನು ಕಂಡಿದೆ. ಸೊಂಡೂರಿನ ಐತಿಹಾಸಿಕ ಹಿನ್ನಲೆಯಲ್ಲಿ ಸೊಂಡೂರು ಸಂಸ್ಥಾನಿಕರ ಪಾತ್ರ ಪ್ರಮುಖವಾಗಿದ್ದು, ಮುಖ್ಯವಾಗಿ ಘೋರ್ಪಡೆ ವಂಶಸ್ಥರು ಸೊಂಡೂರಿನ ಮಹಾರಾಜರೆಂದೇ ಪ್ರಖ್ಯಾತಿಯನ್ನು ಪಡೆದಿದ್ದಾರೆ. ಇಂತಹ ರಾಜವಂಶಸ್ಥರ ಬಗ್ಗೆ ತಿಳಿದುಕೊಳ್ಳುವುದು ಮುಖ್ಯವಾಗಿದೆ.

**ಸಂಸ್ಥಾನಿಕರ ಹುಟ್ಟು ಮತ್ತು ಬೆಳವಣಿಗೆ**

"ಇತಿಹಾಸದ ಅಧ್ಯಯನವೆಂದರೆ ಸಮಾಜದ ಇತರ ಚಟುವಟಿಕೆಗಳ ಹಾಗೆ ಕಾಲ ಮತ್ತು ಸ್ಥಳದ ಪ್ರಧಾನ ಪ್ರವೃತ್ತಿಗಳಿಂದ ರೂಪಿತವಾದುದಾಗಿರುತ್ತದೆ"[೫] ಎಂಬ ಆರ್ನಾಲ್ಡ್ ಟಾಯ್ನಬೀ ಅವರ ಹೇಳಿಕೆಯಿಂದ ಇತಿಹಾಸವೆಂಬುದು ಆಯಾ ದೇಶದ ಪರಿಸರ ಮತ್ತು ಮನೋಧರ್ಮಗಳಿಗೆ ಅನುಗುಣವಾಗಿಯೂ ಆಯಾ ಕಾಲಕ್ಕೆ ಅನುಸಾರವಾಗಿ ಇರುತ್ತದೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ.

ಭಾರತದ ಇತಿಹಾಸವು ಹಲವಾರು ಪ್ರದೇಶ, ಪ್ರಾಂತ, ರಾಜ್ಯ, ಸಂಸ್ಥೆ ಹಾಗೂ ಜನಾಂಗಗಳ ಕಥೆಯಾಗಿದೆ. ವಿವಿಧ ಧರ್ಮಗಳು, ಗುಂಪು ಸಮುದಾಯಗಳು ಇವುಗಳಿಂದ ಕೂಡಿ ನಮ್ಮ ನಾಡಿನ ಇತಿಹಾಸ ಬೆಳೆದಿದೆ.

ಮಹಾಸಾಮ್ರಾಜ್ಯಗಳ ಇತಿಹಾಸವೇ ಈನಾಡಿನ ಈ ದೇಶದ ಇತಿಹಾಸವಲ್ಲ. ಇವು ಪ್ರಮುಖವಾದರೂ ಇವುಗಳಿಗೆ ಸಣ್ಣಪುಟ್ಟ ಸಾಮಂತರಾದ ಸಂಸ್ಥಾನಿಕರು, ಮಹಾಮಂಡಳೇಶ್ವರರು, ನಾಯಕರು, ದೇಸಾಯಿಗಳು ಪಾಳೆಯಗಾರರು, ಒಡೆಯರು ಉಪವಾಹಿನಿಗಳಾಗಿ ಬೆರೆತು ಪ್ರಮುಖ ವಾಹಿನಿಯನ್ನಾಗಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ.

ಸಂಸ್ಥಾನಿಕರ ಪ್ರಾದೇಶಿಕ ಇತಿಹಾಸವನ್ನು ಅರಿಯುವುದರಿಂದ ಇತಿಹಾಸದ ಪೂರ್ಣಚಿತ್ರ ಲಭಿಸುತ್ತದೆ. ಪ್ರಾದೇಶಿಕ ಇತಿಹಾಸದ ರಚನೆಯು, ನಾಡಿನ, ಇತಿಹಾಸದ ರಚನೆಗೆ ಪೂರಕ ಎನ್ನುವುದು ಒಂದು ಅಭಿಪ್ರಾಯವಾಗಿದೆ.

ಕರ್ನಾಟಕ ಹಾಗೂ ದಕ್ಷಿಣ ಭಾರತದ ಇತರೆಡೆಗಳಲ್ಲಿ ಚಿಕ್ಕಪುಟ್ಟ ಪ್ರದೇಶಗಳಲ್ಲಿ ಒಡೆತನವನ್ನು ನಡೆಸುತ್ತಿದ್ದ ನಾಯಕರಿಗೆ ಸಂಸ್ಥಾನಿಕರು ಎಂದು ಪಾಳೆಯಗಾರರೆಂದು ಕರೆಯುತ್ತಾರೆ.[೬]

ವಿಜಯನಗರ ಸಾಮ್ರಾಜ್ಯದ ಪತನಾನಂತರ ಆಳಿದ ಸಾಮಂತರಾದ ಸಂಸ್ಥಾನಿಕರುಗಳೇ ನಾಯಕರು, ಒಡೆಯರು ಪಾಳೆಯಗಾರರೆಂದು ಪ್ರಸಿದ್ಧರಾಗಿದ್ದಾರೆ. ಕನ್ನಡ ನಾಡಿನ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಜೀವನದ ಮೇಲೆ ತಮ್ಮದೇ ಆದ ಮುದ್ರೆ ಒತ್ತಿದರು. ವಿಜಯನಗರ ಸಾಮ್ರಾಜ್ಯ ಪತನಾನಂತರ ಕರ್ನಾಟಕದ ಪರಂಪರೆ ಮತ್ತು ಸಂಸ್ಕೃತಿಯನ್ನು ಕಾಪಾಡಿಕೊಂಡು ಬೆಳೆಸಿಕೊಂಡು ಬಂದವರು ಈ ಸಂಸ್ಥಾನಿಕರಾಗಿದ್ದಾರೆ. ಇವರು ತಮ್ಮ ತಮ್ಮ ಪ್ರಾಂತಗಳಲ್ಲಿ ಸರ್ವತಂತ್ರ ಸ್ವತಂತ್ರರಾಗಿ ಪರಮಾಧಿಕಾರವನ್ನು ನಡೆಸುತ್ತಿದ್ದರು.[೭]

**ಸಂಸ್ಥಾನಿಕರ ಬೆಳವಣಿಗೆ**

ಸಾಹಸ ಶೌರ್ಯ ಕಲಿತನಗಳ ಸಂಗಮವಾಗಿದ್ದ ಸಂಸ್ಥಾನಿಕರು ಕರ್ನಾಟಕದ ರಾಜಕೀಯ ಮೆಟ್ಟಿಲುಗಳನ್ನು ಒಂದೊಂದಾಗಿ ಮೇಲೇರುತ್ತಾ ಬಂದರು. ನಂತರ ಇವರು ಸಾಮಂತ ಪದವಿಯನ್ನು ಅಲಂಕರಿಸಿ ನಿಗದಿತ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತ ತಮ್ಮ ತಮ್ಮ ಅಧೀನ ಕ್ಷೇತ್ರದ ಪ್ರಜೆಗಳಿಂದ ರಾಜನಂತೆ ಗೌರವ ಪಡೆಯುತ್ತಿದ್ದರು. ವಿಜಯನಗರ ಸಾಮ್ರಾಟರ ಆಳ್ವಿಕೆಯ ಕಾಲದಲ್ಲಿ ಅತ್ಯಂತ ಪ್ರಮುಖ ಸ್ಥಾನವನ್ನು ಪಡೆದರು.[೯]

೧೪ನೇ ಶತಮಾನದ ಆರಂಭದಲ್ಲಿ ಮಹಮ್ಮದಿಯರ ದಾಳಿಗಳಿಂದಾಗಿ ಕರ್ನಾಟಕದ ರಾಜಕೀಯ ವ್ಯವಸ್ಥೆಯಲ್ಲಿ ಅಸ್ಥಿರತೆ ತಲೆದೋರಿದಾಗ ಬಹುತೇಕ ಸ್ವತಂತ್ರರಾಗೆ ಆಳ್ವಿಕೆ ನಡೆಸುತ್ತಿದ್ದ ಸ್ಥಳೀಯ ಸಾಮಂತರಾದ ಪಾರುಪತ್ಯ ಸಂಸ್ಥಾನಗಳು ಕಣ್ಮರೆಯಾದವು. ಆದ್ದರಿಂದ ಕೆಲ ದಂಡನಾಯಕರಿಗೆ ರಾಜನು ಪ್ರದೇಶಗಳನ್ನು ಅವರಿಗೆ ಆಳುವ ಅಧಿಕಾರವನ್ನು ನೀಡಿದರು. ಅವರು ಆಯಾ ಪ್ರದೇಶದ ಆದಾಯವನ್ನು ಅನುಭವಿಸುತ್ತ ಆಳ್ವಿಕೆಯನ್ನುನಡೆಸಿದರು. ಅವರು ಸಾಮ್ರಾಟರಿಗೆ ಅವಶ್ಯಕತೆಗನುಗುಣವಾಗಿ ತಮ್ಮಲ್ಲಿದ್ದ ಸೈನ್ಯದ ಸಹಾಯವನ್ನು ಒದಗಿಸುತ್ತಿದ್ದರು. ಇಂತಹ ವ್ಯವಸ್ಥೆಯಫಲವಾಗಿ ಅನೇಕ ಸಂಸ್ಥಾನಗಳು ಬೆಳವಣಿಗೆ ಹೊಂದಿದವು. ಹೀಗೆ ಸಾಮ್ರಾಟರಿಗೆ ಸಲ್ಲಬೇಕಾದ ಸುಂಕ, ತೇರಿಗೆ ಇತ್ಯಾದಿಗಳನ್ನು ಸಂಗ್ರಹಿಸಿ ಕೊಡುತ್ತಾ ಕಪ್ಪ ಕಾಣಿಕೆಯನ್ನು ಸಲ್ಲಿಸುತ್ತಾ ರಾಜರ ಅಧೀನದಲ್ಲಿ ಬೆಳೆದರು.[೧೦]

ವಿಜಯನಗರ ಅರಸರ ಕಾಲದಲ್ಲಿ ಸಂಸ್ಥಾನಿಕರನ್ನು ಅಮರನಾಯಕರೆಂದು ಕರೆಯುತ್ತಿದ್ದರು. ನ್ಯೂನಿಜ್ ಇವರನ್ನು "Chieftains" ಎಂದು ಕರೆಯುತ್ತಿದ್ದರು.[೧೧]

ಸಂಸ್ಥಾನಿಕರಲ್ಲಿ "ದೇಸಗತಿ" ದೇಶಮುಖ, ಪಾಳೆಯಗಾರರು, ಒಡೆಯರು, ನಾಯಕರು ಪ್ರಮುಖರಾಗಿದ್ದಾರೆ.[೧೨]

ಹೀಗೆ ಅರಾಜಕತೆಯ ಭೀತಿಯಿಂದ ತತ್ತರಿಸುತ್ತಿದ್ದ ದಕ್ಷಿಣಭಾರತದ ಜನತೆಗೆ ರಾಜಕೀಯ ಭದ್ರತೆಯನ್ನು ನೀಡಿದ್ದು ಸಂಸ್ಥಾನಿಕರ ಬಹು ಮುಖ್ಯವಾದ ಕೊಡುಗೆಯಾಗಿದೆ. ಇವರು ವ್ಯವಸಾಯದೊಂದಿಗೆ ವ್ಯಾಪಾರ ಕೈಗಾರಿಕೆ, ಕಲೆ ಸಾಹಿತ್ಯಗಳನ್ನು ಪ್ರೋತ್ಸಾಹಿಸಿಕೊಂಡು ಬಂದರು.

**ಸಂಸ್ಥಾನಿಕರು ಮತ್ತು ಬ್ರಿಟಿಷರು**

ಈಸ್ಟ್ ಇಂಡಿಯಾ ಕಂಪನಿ ಮುಖಾಂತರ ಭಾರತದೊಡನೆ ವ್ಯಾಪಾರಿ ಸಂಬಂಧ ಬೆಳೆಸಿದ ಬ್ರಿಟಿಷರು ದೇಶೀಯ ಆಳರಸರಲ್ಲಿನ ಅನೈಕ್ಯತೆಯ ದುರ್ಲಾಭ ಪಡೆದು ರಾಜಕೀಯ ಪ್ರಭುತ್ವ ಸ್ಥಾಪಿಸಲು ಹೊಂಚು ಹಾಕಿದರು. ೧೭೬೫ರಲ್ಲಿ ಬಂಗಾಲದಲ್ಲಿ ದಿವಾನಿಹಕ್ಕನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾದ ಬ್ರಿಟಿಷರು ಕಾಲಾನುಕ್ರಮದಲ್ಲಿ ದೇಸಿಯ ಆಳರಸರಲ್ಲಿ ವೈಮನಸ್ಸನ್ನು ಬೆಳೆಸುವುದರ ಜೊತೆಗೆ ಅವರೊಡನೆ ಯುದ್ಧದ ಮೂಲಕ ತಮ್ಮ ಬಲ ಪ್ರದರ್ಶಿಸಿದರು.[೧೩]

ಲಾರ್ಡ್‌ವೆಲ್ಲೆಸ್ಲಿಯ "ಸಹಾಯಕ ಸೇನಾ ಪದ್ಧತಿ ದೇಸಿಯ ಆಳರಸರ ಒಳಾಡಳಿತ ಪ್ರವೇಶಿಸಲು ಕಂಪನಿ ಸರ್ಕಾರಕ್ಕೆ ಸಹಾಯಕವಾಯಿತು. ಸಹಾಯಕ ಸೈನ್ಯ ಪದ್ಧತಿಯಿಂದಾಗಿ ದೇಸೀಯ ಆಳರಸರು ರಾಜ್ಯಗಳ ಗಡಿ ಸಂರಕ್ಷಣೆಯ ಹೊಣೆಯನ್ನು ಬ್ರಿಟಿಷ್ ಸೈನಿಕರಿಗೆ ಒಪ್ಪಿಸಿ, ಪ್ರಜಾಪಾಲನೆಗೆ ಗಮನ ಕೊಡದೆ ಐಶಾರಾಮಿ ಜೀವನ ನಡೆಸುತ್ತಿದ್ದರು. ಇದರಿಂದಾಗಿ ರಾಜ್ಯಭಾರದಲ್ಲಿ ಅವ್ಯವಸ್ಥೆ ತಲೆದೊರ ಹತ್ತಿದವು.[೧೪]

ಸಂಸ್ಥಾನಗಳ ಆಂತರಿಕ ಆಡಳಿತದಲ್ಲಿ ಕೈ ಹಾಕುವ ಅಧಿಕಾರ ಲಾರ್ಡ್‌ವೆಲ್ಲೆಸ್ಲಿಯಿಂದ ಆರಂಭಗೊಂಡು ಲಾರ್ಡ್ ಡಾಲ್ ಹೌಸಿಯ ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ಕ್ರಮದೊಂದಿಗೆ ಮುಂದುವರೆಯಿತು. ಇಷ್ಟಾದರು ಸಂಸ್ಥಾನಗಳನ್ನು ಪೂರ್ಣ ನಿರ್ನಾಮ ಮಾಡಿ ಅವುಗಳನ್ನು ತಮ್ಮ ಹಿಡಿತದಲ್ಲಿ ಒಳಪಡಿಸಿಕೊಳ್ಳದಿದ್ದುದು ಬ್ರಿಟಿಷರ ಮುತ್ಸದ್ದಿತನವೆಂದೇ ಹೇಳಬೇಕು.[೧೫]

೧೮೫೭ರ ಸಿಪಾಯಿ ದಂಗೆಯಿಂದ ಬ್ರಿಟಿಷರ ಆಳ್ವಿಕೆಗೆ ತೊಂದರೆ ಪ್ರಾರಂಭವಾದ ಮೇಲೆ ಅದನ್ನು ಬಗ್ಗು ಬಡಿಯಲು ೧೮೫೮ರ ವಿಕ್ಟೋರಿಯಾ ಮಹಾರಾಣಿಯ ಘೋಷಣೆಯಿಂದ ವಿದಿತವಾಗುತ್ತದೆ. ಹೀಗೆ ಸಂಸ್ಥಾನಗಳಿಗೂ ಬ್ರಿಟಿಷರ ರಾಜ್ಯಕ್ಕೂ ನಿಕಟ ಸಂಬಂಧವಿತ್ತು ಬ್ರಿಟಿಷ್ ರಾಜ್ಯಕ್ಕೆ ಸಂಬಂಧಪಟ್ಟ ಹಿತಾಸಕ್ತಿಗಳ ಪರಿಣಾಮ ಸಂಸ್ಥಾನಗಳ ಮೇಲೆಯೂ ಆಗುತ್ತವೆ.[೧೬]

ಬ್ರಿಟಿಷರು ಸಂಸ್ಥಾನಗಳಲ್ಲಿ ಅಲ್ಪಬದಲಾವಣೆ ತರಲು ಪ್ರಯತ್ನಿಸಿದರೂ ಸಂಸ್ಥಾನಗಳು ಮಾತ್ರ ಬ್ರಿಟಿಷ್ ರಾಜ್ಯದಲ್ಲಿನ ಸುಧಾರಣಾ ಕ್ರಮಗಳಿಗೆ ಅನುಸಾರವಾಗಿ ತಮ್ಮ ಆಡಳಿತ ವ್ಯವಸ್ಥೆಯಲ್ಲಿ ತಕ್ಕ ಬದಲಾವಣೆ ಮಾಡದೆ. ಪ್ರತಿಗಾಮಿ ಮಾರ್ಗವನ್ನು ಅನುಸರಿಸಿದರು. ಸಂಸ್ಥಾನಗಳನ್ನು ಆಳುವ ರಾಜರು ನಿರಂಕುಶ ರೀತಿಯಿಂದ ಆಳಲು ಪ್ರಯತ್ನಿಸಿದರು. ಇದರ ಫಲವಾಗಿ ೧೮೮೫ರಲ್ಲಿ ದಕ್ಷಿಣ ಸಂಸ್ಥಾನಗಳಲ್ಲಿ ಒಂದು ಕಾಂಗ್ರೇಸ್ ಕಮಿಟಿಯನ್ನು ಸ್ಥಾಪಿಸಲಾಗಿತ್ತು.[೧೭] ಈ ಕಮಿಟಿಗಳಲ್ಲಿ ಸಂಸ್ಥಾನಿಕರ ವಿರುದ್ಧವಾದ ಸರಕಾರದ ನೀತಿಯನ್ನು ಖಂಡಿಸುವ ಗೊತ್ತುವಳಿ ಬರುತ್ತಿದ್ದವು. ಇವು ನಿರ್ಲಿಪ್ತಗೊಂಡಾಗ ೧೯೨೨ರಲ್ಲಿ ಸಂಸ್ಥಾನಿ ಪ್ರಜಾ ಪರಿಷತ್ತು ಸ್ಥಾಪಿತಗೊಂಡಿತು.[೧೮] ಇದರ ಮೂಲಕ ನ್ಯಾಯಾಡಳಿತ ಕೋರ್ಟು ಜನರ ಸಮಸ್ಯೆಗಳಿಗೆ ಪರಿಹಾರ ಆರಂಭಗೊಂಡುದ್ದು, ಮೊದಲಾದ ಸುಧಾರಣಾ ಕಾರ್ಯಗಳು ಸಂಸ್ಥಾನಿಕರು ಪ್ರಜೆಗಳ ಹತ್ತಿರ ಬಂದರೆಂದು ಹೇಳಬಹುದು.[೧೯]

**ಸಂಸ್ಥಾನಗಳ ವರ್ಗೀಕರಣ**

ಸಂಸ್ಥಾನಗಳು ಹಾಗೂ ಬ್ರಿಟಿಷ್ ಸರಕಾರದ ಪರಸ್ಪರ ಸಂಬಂಧವನ್ನು ಅನುಲಕ್ಷಿಸಿ ಸಂಸ್ಥಾನಗಳನ್ನು ಎರಡು ವಿಧವಾಗಿ ವರ್ಗೀಕರಿಸಬಹುದು.

೧. ಬ್ರಿಟೀಷ್ ಸರಕಾರದ ಜೊತೆ ಒಡಂಬಡಿಕೆ ಮಾಡಿಕೊಂಡ ಸಂಸ್ಥಾನಗಳ ಒಂದು ವರ್ಗ.

೨. ಬ್ರಿಟೀಷ್ ಸರಕಾರವೇ ಸನ್ನದುಗಳನ್ನು ಕೊಟ್ಟು, ನಿರ್ಮಿಸಿದ ಸಂಸ್ಥಾನಗಳ ಇನ್ನೊಂದು ವರ್ಗ.[೨೦]

ಈ ಬಗೆಯ ವರ್ಗೀಕರಣ ಬ್ರಿಟೀಷ್ ಸರಕಾರ ಮತ್ತು ಸಂಸ್ಥಾನಗಳ ಪರಸ್ಪರ ಸಂಬಂಧದ ದೃಷ್ಟಿಯಿಂದ

ಮಹತ್ವಾದ್ದಾದರೂ ಕಾಲಾನುಕ್ರಮದಲ್ಲಿ ಕಂಪನಿ ತಾನು ಗಳಿಸಿದ ಭೂಮಿ ಸೀಮೆಗಳನ್ನು ಭದ್ರ ಪಡಿಸಿಕೊಳ್ಳುವ ಸಲುವಾಗಿ ದೇಸೀಯ ಆಳರಸರೊಡನೆ ಬಲ ಪ್ರದರ್ಶಿಸಿ ತಮ್ಮ ಅಧಿನದಲ್ಲಿಟ್ಟುಕೊಂಡಿರುವುದನ್ನು ದಾಖಲೆಗಳಿಂದ ತಿಳಿಯಬಹುದಾಗಿದೆ.[೨೧]

ಸಂಸ್ಥಾನಿಕರು ಆಂತರಿಕವಾಗಿ ಅನಿಯಂತ್ರಿತ ಅಧಿಕಾರ ಹೊಂದಿದ್ದರಿಂದ ಜನತೆಯ ಬೇಕು ಬೇಡಿಕೆಗಳಿಗೆ ಸ್ಪಂದಿಸುತ್ತಿರಲಿಲ್ಲ. ಕೆಲವರು ಸಂಸ್ಥಾನದ ಖಜಾನೆಯಲ್ಲಿರುವ ಹಣವನ್ನು ತಮ್ಮ ತಮ್ಮ ಸಂಭೋಪಭೋಗಗಳಿಗೆ ವಿನಿಯೋಗಿಸಿದರು. ಈ ಸಂಸ್ಥಾನಿಕರು ಐಷಾರಾಮಿಗಳಾಗಿ ಇರಲು ಬಯಸಿದ್ದರಿಂದ ಬ್ರಿಟೀಷ್ ಅಧಿಕಾರಿಗಳ ಸ್ವಾಗತಕ್ಕಾಗಿ ಅಪರಿಮಿತ ಹಣ ಖರ್ಚು ಮಾಡಲು ಮನಸ್ಸು ಮಾಡಿದರು. ಜೊತೆಗೆ ಜನರ ಮೇಲೆ ಹೆಚ್ಚಿನ ತೆರಿಗೆ ವಿಧಿಸಿದರು.

### ೩.೧. ಸೊಂಡೂರು ಸಂಸ್ಥಾನದ ಮೂಲ

ಸೊಂಡೂರು ಸಂಸ್ಥಾನವು ಘೋರ್ಪಡೆ ರಾಜ ಮನೆತನದ ಸಂಸ್ಥಾನವಾಗಿ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಸೊಂಡೂರು ಸಂಸ್ಥಾನದ ಮೂಲ ಪುರುಷ ಸಿದ್ಧೋಜಿರಾವ್ ಘೋರ್ಪಡೆಯಾಗಿದ್ದು. ಈತನಿಗಿಂತಲೂ ಹಿಂದೆ ಘೋರ್ಪಡೆ ವಂಶಸ್ಥರ ಇತಿಹಾಸವು ವ್ಯಾಪಾಕವಾದ ವಿಸ್ತಾರವನ್ನು ಪಡೆದಿದೆ.

ಇತಿಹಾಸದ ಆಧಾರಗಳಿಂದ ಇವರ ಮೂಲ ಪುರುಷ ರಾಜಸ್ಥಾನದಲ್ಲಿ ಆಳುತ್ತಿದ್ದ ಸಿಸೋಡಿಯಾ ವಂಶದ ಸುಜನ್‌ಸಿಂಗ್ ಅಥವಾ ಸುಜ್ಜನ್ ಸಿಂಗ್ ಎಂದು ಗುರುತಿಸಲಾಗಿದೆ.[೨೨] ೧೩೩೩ರಲ್ಲಿ ದೆಹಲಿಯ ಸುಲ್ತಾನನಾದ ಅಲ್ಲಾವುದ್ದಿನ್ ಖಿಲ್ಜಿಯು ಚಿತ್ತೂರನ್ನು ಆಕ್ರಮಿಸಿಕೊಂಡಾಗ ಅಲ್ಲಿಂದ ದಕ್ಷಿಣದ ಕಡೆಗೆ ವಲಸೆ ಬಂದರು, ದೇಶಾದ್ಯಂತ ನಿರ್ಮಾಣವಾಗಿರುವ ಸಂಕ್ಷೋಭೆಯ ವಾತವರಣದಲ್ಲಿ ಭದ್ರವಾದ ಸೈನಿಕ ಆಡಳಿತವನ್ನು ಸ್ಥಾಪಿಸುವುದು ಈತನ ಉದ್ದೇಶವಾಗಿತ್ತು. ಆದರೆ ತನ್ನ ಮಹತ್ವಾಕಾಂಕ್ಷೆ ಈಡೇರುವ ಮೊದಲೆ ೧೩೫೦ರಲ್ಲಿ ನಿಧನನಾದನು. ಈತನ ತಲೆಮಾರಿನವರು ಆಗ ದಕ್ಷಿಣದಲ್ಲಿ ತಲೆ ಎತ್ತಿದ ಬಹುಮನಿ ಸುಲ್ತಾನರ ಆಶ್ರಯದಲ್ಲಿ ಸೇನಾಪತಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಮನೆತನದ ೫ನೇ ಉತ್ತರಾಧಿಕಾರಿಯಾಗಿ ೪-೫ ತಲೆಮಾರುಗಳ ನಂತರ ಇಂದ್ರಸೇನನು ಬೆಳಕಿಗೆ ಬರುತ್ತಾನೆ. ಇವನ ಮಕ್ಕಳಾದ ಕರ್ಣಸಿಂಗ್‌ನು ಘೋರ್ಪಡೆ ಎಂಬ, ಶುಭಕೃಷ್ಣನು ಬೋಂಸ್ಲೆ ಎಂಬ ಉಪನಾಮದೊಂದಿಗೆ ಕರೆಯಲ್ಪಟ್ಟಿದ್ದಾರೆ. ಆದರೆ ಬೋಂಸ್ಲೆ ಎಂಬ ಉಪನಾಮವನ್ನು ಯಾವಾಗ ಮತ್ತು ಹೇಗೆ ಗಳಿಸಿಕೊಂಡರು ಎಂಬುದು ಮಾತ್ರ ಇಂದಿಗೂ ತಿಳಿಯದಾಗಿದೆ. ಶುಭಕೃಷ್ಣನ ಉತ್ತರಾಧಿಗಳೆಲ್ಲರನ್ನು ಬೊಂಸ್ಲೆಗಳೆಂದು ಜೊತೆಗೆ ಶಿವಾಜಿಯ ಪೂರ್ವಿಕರೆಂದು ಗುರುತಿಸಲಾಗುತ್ತದೆ.

ಘೋರ್ಪಡೆ ಎಂಬುದು ಈ ವಂಶಸ್ಥರ ಉಪನಾಮವಾಗಿದ್ದು, ಉಪನಾಮ ಇವರಿಗೆ ಬರಲು ಒಂದು ಕುತೂಹಲಕಾರಿಯಾದ ಕಥೆಯೊಂದಿದೆ. ಸುಮಾರು ಕ್ರಿ.ಶ.೧೪೭೦ ಕಾಲಾವಧಿಯಲ್ಲಿ ಪಶ್ಚಿಮ ಘಟ್ಟಗಳ ಅಬೇಧ್ಯವಾದ ಕೋಟೆಯೊಂದನ್ನು ಇವರ ಪೂರ್ವಿಕರು ಬಹಳ ಚಾಣಾಕ್ಷತನದಿಂದ ವಶಪಡಿಸಿಕೊಂಡಿದ್ದರು. ಇಲ್ಲಿ ಇವರಿಗೆ ಸಹಾಯ ಮಾಡಿದ್ದು ದೊಡ್ಡ ಉಡಗಳು. ಈ ಉಡಗಳು ಬಿರುಕು ಅಥವಾ ರಂಧ್ರಗಳಲ್ಲಿ

ಬಲವಾಗಿ ಕಚ್ಚಿಕೊಂಡು ದೃಢವಾಗಿ ನಿಲ್ಲುತ್ತವೆ. ಹಾಗಾಗಿ ಅದರ ನಡುವಿಗೆ ಹಗ್ಗವನ್ನು ಕಟ್ಟಿ ಅದರ ಸಹಾಯದಿಂದ ಮನುಷ್ಯರು ಮೇಲೇರಿ ದುರ್ಗಮ ಪ್ರದೇಶಗಳನ್ನು ತಲುಪುತ್ತಿದ್ದರು. ಉಡಗಳನ್ನು ಮರಾಠಿಯಲ್ಲಿ ಘೋರ್ಪಡ್ ಎಂದು ಕರೆಯುತ್ತಾರೆ.

ಕರಣ್‌ಸಿಂಗ್ ಮತ್ತು ಭೀಮಸಿಂಗರು ಉಡದ ಸಹಾಯದಿಂದ ಅಭಧ್ಯ ಕೋಟೆಯನ್ನು ಪ್ರವೇಶಿಸಿ ಬಾಗಿಲನ್ನು ತೆರೆದು ತಮ್ಮ ಸೈನ್ಯ ಒಳಬರಲು ಅವಕಾಶ ಮಾಡಿಕೊಟ್ಟು ವಿಜಯಕ್ಕೆ ಕಾರಣಕರ್ತರಾದರು. ಆ ಪ್ರಯತ್ನದಲ್ಲಿ ತಂದೆ ಕರಣಸಿಂಗ್ ಮಡಿದನು. ಮಗನಾದ ಭೀಮಸಿಂಗ್‌ನಿಗೆ ಬಹುಮನಿ ಸುಲ್ತಾನನು ೧೪೭೦ರಲ್ಲಿ ಸನ್ನದನ್ನು ನೀಡಿ ರಾಜಾ ಘೋರ್ಪಡೆ ಬಹದ್ದೂರ್ ಎಂಬ ಪದವಿಯನ್ನಿತ್ತು ಮುಧೋಳದೊಡನೆ ಸುತ್ತಲಿನ ೮೪ ಹಳ್ಳಿಗಳನ್ನು ಜಹಗೀರಾಗಿ ಕೊಟ್ಟು ಗೌರವಿಸಿದ. ಹೀಗಾಗಿ ಇವರ ವಂಶ ಘೋರ್ಪಡೆ ವಂಶ ಎಂದೇ ಪ್ರಸಿದ್ಧವಾಯಿತು.[೨೩]

ಸೊಂಡೂರು ಸಂಸ್ಥಾನದ ಪೂರ್ವದಲ್ಲಿ ಬೇಡ ದೊರೆಗಳು ಈ ಪ್ರದೇಶವನ್ನು ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ. ೧೭೧೩ರಲ್ಲಿ ಮರಾಠ ಸೇನಾಪತಿ ಸಿದ್ದೋಜಿ ಘೋರ್ಪಡೆ ಜರಿಮಲೆ ನಾಯಕರನ್ನು ಓಡಿಸಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. ನಂತರ ಪಾಳೆಯಗಾರರು. ೧೭೨೮ರಲ್ಲಿ ಮತ್ತೆ ದಾಳಿ ಇಟ್ಟಾಗ ಅದನ್ನು ಮೆಟ್ಟಿ ನಿಂತು ಮತ್ತೊಮ್ಮೆ ಆ ಪಾಳೆಯ ಗಾರರನ್ನು ಸೋಲಿಸಿದನು.[೨೪] ಟಿ.ಬಿ.ಕೇಶವರಾವ್‌ರವರು. ಜರಮಲಿ ಹಳ್ಳಿಯ ಪೆನ್ನನಾಯಕನಿಗೆ ವಿಜಯನಗರದ ಅರಸ ಅಚ್ಯುತ ರಾಯನಿಂದ (ಕ್ರಿ.ಶ.೧೫೩೦-೩೨) ಜಹಗೀರು ದೊರೆಯಿತೆಂದು ಉಲ್ಲೇಖಿಸಿದ್ದಾರೆ. ಪೆನ್ನನಾಯಕ ಅಚ್ಯುತರಾಯನಿಗೆ ಯುದ್ಧದಲ್ಲಿ ಉತ್ತಮ ಸೇವೆ ಸಲ್ಲಿಸಿದ್ದ. ಆತನ ನಂತರದ ಪಾಳೆಯಗಾರರು ಮತ್ತೆ ಕೆಲವು ಹಳ್ಳಿಗಳನ್ನು ಪಾಳೆಯಪಟ್ಟಿಗೆ ಸೇರಿಸಿಕೊಂಡರು ಸೊಂಡೂರಿನ ಕಣಿವೆ ಪ್ರದೇಶವೂ ಜರಿಮಲೆ ಪಾಳೆಯಗಾರನಿಗೆ ಅಧೀನವಾಯಿತು. ಔರಂಗಜೇಬನ್ ಮರಣದ ನಂತರ ೧೭೦೭ ಮರಾಠರ ಛತ್ರಪತಿ ಸಾಹು ಚೌತ್ ಎಂಬ ಕಪ್ಪವನ್ನು ಇಡೀ ದಕ್ಷಿಣ ಭಾರತದಲ್ಲಿ ಸಂಗ್ರಹ ಮಾಡುವ ಅಧಿಕಾರವನ್ನು ಪಡೆದದ್ದು, ಸಹಜವಾಗಿ ಮರಾಠರು ದಕ್ಷಿಣದ ಮೇಲೆ ದಾಳಿ ನಡೆಸುವಂತೆ ಮಾಡಿತು.[೨೫] ಹೀಗಾಗಿ ಬಳ್ಳಾರಿ ಭಾಗದಲ್ಲೂ ಇವರ ಪ್ರವೇಶವಾಯಿತು. ಜರಿಮಲೆ ಪಾಳೆಯಗಾರನ ದೌರ್ಬಲ್ಯದಿಂದಾಗಿ ಅರಾಜಕ ವ್ಯವಸ್ಥೆ ನೆಲೆಸಿತ್ತು. ಚಿತ್ರದುರ್ಗ ಮತ್ತು ಹರಪನಹಳ್ಳಿ ಪಾಳೆಯಗಾರರು ಜರಮಲಿಯನ್ನು ಕ್ರಮೇಣ ವಶಪಡಿಸಿಕೊಳ್ಳುತ್ತಿದ್ದರು. ಈ ಸಂದರ್ಭದಲ್ಲಿ ಮರಾಠರ ವೀರಸೇನಾನಿ ಸಿದ್ದೋಜಿರಾವ್ ಘೋರ್ಪಡೆ (೧೭೨೬-೪೨) ಕ್ರಿ.ಶ.೧೭೨೮ರಲ್ಲಿ ಸೊಂಡೂರು ಪ್ರದೇಶವನ್ನು ಕಷ್ಟವಿಲ್ಲದ ಜರಿಮಲೆ ಪಾಳೆಗಾರರಿಂದ ಗೆದ್ದುಕೊಂಡನು.[೨೬]

ಹೀಗೆ ಸೊಂಡೂರು ಸಂಸ್ಥಾನದ ಮೂಲ ಪುರುಷನೆಂದು ಸಿದ್ದೋಜಿರಾವ್ ಘೋರ್ಪಡೆಯವರನ್ನು ಗುರುತಿಸಲಾಗುತ್ತದೆ.[೨೭] ಆದರೆ ಡಾ.ವಿರೂಪಾಕ್ಷಿ ಪೂಜಾರಹಳ್ಳಿಯವರು ತಮ್ಮ ಬಳ್ಳಾರಿ ಜಿಲ್ಲೆಯ ಪಾಳೆಯಗಾರರು ಎಂಬ ಕೃತಿಯಲ್ಲಿ ಸೊಂಡೂರು ಸಂಸ್ಥಾನದ ಮೂಲ ಪುರುಷನೆಂದು ಗುರುತಿಸುತ್ತಿರುವ ಸಿದ್ದೋಜಿರಾವ್ ಘೋರ್ಪಡೆಯವರನ್ನು ಅನುಮಾನಿಸುತ್ತಾರೆ. ಕ್ರಿ.ಶ. ೧೭೧೫ರಲ್ಲಿಯೆ ಸಿದ್ದೋಜಿ ಘೋರ್ಪಡೆ

ಮರಣ ಹೊಂದುವುದರಿಂದ ೧೭೨೮ರಲ್ಲಿ ಸಂಸ್ಥಾನ ಸ್ಥಾಪನೆಯಾಗಿಲ್ಲ ಎಂದು ಹೇಳುವುದರ ಮೂಲಕ ಇನ್ನು ಹೆಚ್ಚಿನ ಸಂಶೋಧನೆಗೆ ಅನುವು ಮಾಡಿಕೊಟ್ಟಿದ್ದಾರೆ.

### ೩.೨. ಪ್ರಮುಖ ಸಂಸ್ಥಾನಿಕರು

ಸಿದ್ದೋಜಿ ಘೋರ್ಪಡೆಯಿಂದ ಆರಂಭಗೊಂಡ ಈ ಸೊಂಡೂರು ಸಂಸ್ಥಾನ ಹಲವಾರು ರಾಜರ ಆಳ್ವಿಕೆಗೆ ಒಳಪಟ್ಟಿದ್ದಿತು. ಸೊಂಡೂರು ಸಂಸ್ಥಾನವನ್ನು ಆಳ್ವಿಕೆಮಾಡಿದ ಪ್ರಮುಖ ಸಂಸ್ಥಾನಿಕರಲ್ಲಿ ಸಿದ್ದೋಜಿರಾವ್ ಘೋರ್ಪಡೆ, ಮುರಾರಿರಾವ್ ಘೋರ್ಪಡೆ, ಶಿವರಾಯ, ವೆಂಕಟರಾಯ, ಶಿವಷಣ್ಮುಖರಾಯ, ವೆಂಕಟರಾವ್, ಯಶವಂತರಾವ್, ಹಿಂದೂರಾವ್ ಘೋರ್ಪಡೆ ಯವರು ಪ್ರಮುಖರಾಗಿದ್ದಾರೆ. ಇವರ ಆಳ್ವಿಕೆಯು ೧೭೨೮ರಿಂದ ೧೯೫೬ರವರೆಗೆ ಹಲವಾರು ಏರುಪೇರುಗಳಿಂದ ಕೂಡಿತ್ತು ಎಂದು ಹೇಳಬಹುದು.

### ಸಿದ್ದೋಜಿರಾವ್ ಘೋರ್ಪಡೆ (೧೭೧೩ ರಿಂದ ೧೭೩೧)

ಬಹಿರ್ಜಿ ಹಿಂದೂರಾಯನ ಮಗ ಸಿದ್ದೋಜಿರಾವ್ ಘೋರ್ಪಡೆ ಜರಿಮಲೆ ಪಾಳೆಯಗಾರರಿಂದ ಸೊಂಡರನ್ನು ೧೭೧೩ರಲ್ಲಿ ವಶಪಡಿಸಿಕೊಂಡನು.[೨೮] ಮತ್ತೆ ಜರಿಮಲೆ ಪಾಳೆಯಗಾರರು ೧೭೨೮ರಲ್ಲಿ ಸೊಂಡೂರಿನ ಮೇಲೆ ದಾಳಿ ಮಾಡಿದಾಗ ಅವರನ್ನು ಸೋಲಿಸಿ ಕಳುಹಿಸಿದ. ಗುತ್ತಿ ಅವನ ವಶದಲ್ಲಿಯೆ ಇತ್ತು.

೧೭ನೇ ಶತಮಾನದ ಉತ್ತರಾರ್ಧ ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿ ಸಂಕಷ್ಟದಲ್ಲಿತ್ತು. ಈ ಸಂದರ್ಭದಲ್ಲಿ ಕೆಲವು ಪ್ರಮುಖ ಘಟನೆಗಳು ನಡೆಯುತ್ತಿತ್ತು. ಅವುಗಳೆಂದರೆ ಶಾಹಿ ಮನೆತನಗಳ ಒಳಜಗಳ, ಪೇಶ್ವೆಗಳ ರಾಜ್ಯ ವಿಸ್ತಾರದ ದಾಹ, ಮೈಸೂರಿನ ಹೈದರಾಲಿಯ ಮಹತ್ವಕಾಂಕ್ಷೆ ಇವುಗಳಿಂದಾಗಿ ಇಡೀ ದಕ್ಷಿಣ ಭಾರತಗೊಂದಲಮಯ ಸ್ಥಿತಿಯಲ್ಲಿತ್ತು. ಜನಸಾಮಾನ್ಯರಿಗೆ ನೆಮ್ಮದಿ ಇರಲಿಲ್ಲ. ಯುದ್ಧದ ಭೀತಿ ವ್ಯಾಪಕವಾಗಿತ್ತು. ಈ ಸಮಯದಲ್ಲಿ ಸಿದ್ದೋಜಿರಾವ್ ಸೊಂಡೂರನ್ನು ಸಮರ್ಪಕವಾಗಿ ಮುನ್ನೆಡುಸುತ್ತಿದ್ದ ಆದರೆ ಸಿದ್ದೋಜಿರಾವ್ ೧೭೩೧ರಲ್ಲಿ ಮರಣ ಹೊಂದಿದನು.

ಈತನಿಗೆ ೪ ಜನ ಹೆಂಡತಿಯರು ಇವರಿಗೆ ದೌಲತ್‌ರಾವ್,ಭುಜಂಗರಾವ್, ಗೋಪಾಲ್ ರಾವ್, ಮುರಾರಿರಾವ್ ಎಂಬ ಮಕ್ಕಳಾದರು. ಭುಜಂಗರಾವ್ ಬಾಲ್ಯದಲ್ಲೇ ಮಡಿದ ಗೋಪಾಲ್‌ರಾವ್ ಅಸಮರ್ಥನಾಗಿದ್ದ ಆದ್ದರಿಂದ ಮುರಾರಿರಾವ್ ಸೊಂಡೂರಿನ ವಾರಸುದಾರನಾದ, ಇನ್ನೊಬ್ಬ ತಮ್ಮ ದೌಲತ್‌ರಾವ್ ಧಾರವಾಡದ ಬಳಿ ಇರುವ ಗಜೇಂದ್ರಗಡ ಸಂಸ್ಥಾನದ ಜಹಗೀರುದಾರನಾದ.[೨೯]

### ಮುರಾರಿ ರಾವ್ ಘೋರ್ಪಡೆ (೧೭೩೧-೧೭೭೭)

ಸೊಂಡೂರು ಮತ್ತು ಗುತ್ತಿ ಪ್ರದೇಶಗಳನ್ನಳಿದ ಘೋರ್ಪಡೆ ವಂಶದವರಲ್ಲಿಯೇ ಅತ್ಯಂತ ಶಕ್ತಿಶಾಲಿ, ಧೀಮಂತ, ಧೀರೊದತ್ತ ಅಧಿಪತಿ ಎಂದರೆ ಮುರಾರಿರಾವ್. ಇವನು ಅಧಿಕಾರಕ್ಕೆ ಬಂದಾಗ ೩೨ವರ್ಷ ವಯಸ್ಸಾಗಿತ್ತು. ಇವನು ಗುತ್ತಿಯ ಆಳರಸ ಎಂದೇ ಪ್ರಸಿದ್ಧರಾಗಿದ್ದು, ಮರಾಠರಿಗೆ ಯಾವಾಗಲೂ ಸಹಾಯ

ಹಸ್ತ ನೀಡುತ್ತಿದ್ದನು. ತಂದೆಯ ನಾಯಕತ್ವದಲ್ಲಿ ಅನೇಕ ಯುದ್ಧಗಳಲ್ಲಿ ಹೋರಾಡಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ವಿರೋಚಿತ ಕ್ಷೇತ್ರವನ್ನು ಅಸ್ಸೀಮ ಸ್ವಾತಂತ್ರ್ಯ ಪ್ರಿಯತೆಯನ್ನು ಅವರು ರೂಢಿಸಿಕೊಂಡಿದ್ದರು.

**ಮುರಾರಿರಾವ್ ಘೋರ್ಪಡೆಯವರ ವ್ಯಕ್ತಿತ್ವ**

ಇವರು ಒಬ್ಬ ಶಾಂತ ಸ್ವಭಾವದ ತುಂಬಾ ಚಾಣಾಕ್ಷ ಗುಣದವರಾಗಿದ್ದರು. ಇವರ ದೈಹಿಕ ಸ್ವರೂಪದ ಬಗ್ಗೆ ವಿವರಗಳಿಲ್ಲ. ಬದಲಾಗಿ ಪ್ರಸಿದ್ಧ ಇತಿಹಾಸಕಾರ ಜಿ.ಎಸ್.ಶ್ರೀನಿವಾಸ ಬಾಲಿ ತಮ್ಮ ಉಪನ್ಯಾಸಗಳಲ್ಲಿ ಚಿತ್ರಿಸುತ್ತಿದ್ದ ಮುರಾರಿರಾಯರ ವ್ಯಕ್ತಿತ್ವವನ್ನು ೧೯೨೦ರಲ್ಲಿ ಮದರಾಸಿನ ವಿದ್ಯಾರ್ಥಿಗಳು ಹೀಗೆ ಸ್ಮರಿಸುತ್ತಾರೆ.

ಅವರದು ಒಂದು ಭವ್ಯ ವ್ಯಕ್ತಿತ್ವ...ಉದ್ದುದ್ದ ಕೈ ಕಾಲುಗಳ ಅಜಾನುಬಾಹು ದಾಪುಗಾಲಿನ ನಡಿಗೆ, ಗುತ್ತಿಕೋಟೆಯೆಡೆಗೆ ಧೀರ ನಡಿಗೆಯಲ್ಲಿ ಸಾಗಿಹೋಗಿ ಇಂದಿಗೂ ಮುರಾರಿ ರಾವ್ ಜಾಗ ಎಂದೇ ಹೆಸರಾದ ಎತ್ತರದ ಜಾಗದಲ್ಲಿ ತೀಕ್ಷ್ಣದೃಷ್ಟಿಯ ಗರುಡ ಪಕ್ಷಿಯಂತೆ ನೆಟ್ಟಗೆ ಕೂತುಬಿಡುತ್ತಿದ್ದರು. ಇವರು ತಮ್ಮ ಸಾಹಸ ಕೆಚ್ಚೆದೆಗಳಿಂದಾಗಿ ಡೆಕ್ಕನ್ನಿನಲ್ಲೆ ಅತ್ಯಂತ ಪರಾಕ್ರಮ ಎಂದು ರಾಜನೀತಿಜ್ಞನೆಂದು ಹೆಸರುವಾಸಿಯಾಗಿದ್ದರು. ಇವರು ಅತ್ಯುತ್ತಮ ಅಶ್ವಸೈನ್ಯವನ್ನು ತಯಾರು ಮಾಡಿದ್ದರು. ಹೋರಾಡುವ ಸಾಮರ್ಥ್ಯ ಪರಾಕ್ರಮ ಮತ್ತು ಶಿಸ್ತುಗಳಿಗೆ ಮುರಾರಿರಾಯರ ಅಶ್ವಸೈನ್ಯ ತುಂಬಾ ಪ್ರಸಿದ್ಧವಾಗಿತ್ತು.[೩೦]

ಪ್ರಸಿದ್ಧ ಇತಿಹಾಸಕಾರ ರಾಬರ್ಟ್ ಓರ್ಮೆ ಅವರು, 'ಮುರಾರಿರಾವ ಮತ್ತು ಅವರ ಸೇನಾಪಡೆಗಳ ಬಗ್ಗೆ ಹೀಗೆ ಹೇಳುತ್ತಾರೆ. ತಮ್ಮ ವೀರ ಕಾರ್ಯಗಳಿಂದ ಮುರಾರಿರಾವ್ ಬಹುಬೇಗನೆ ನೆರೆ ಹೊರೆಯ ಪ್ರದೇಶಗಳ ಪ್ರಶಂಸೆಗೂ ಗೌರವಕ್ಕೂ ಪಾತ್ರರಾದರು. ತನ್ನ ನಾಡಿನವರೆಂದು ಎಲ್ಲಾರನ್ನು ಸೇನೆಗೆ ಸೇರಿಸಿಕೊಂಡು ಬಿಡುತ್ತಿರಲಿಲ್ಲ. ಶೌರ್ಯ ಸಾಹಸ ತುಂಬಿರುವ ಯೋಧರನ್ನು ಮಾತ್ರ ಅವರು ಆರಿಸಿಕೊಳ್ಳುತ್ತಿದ್ದರು. ಈ ರೀತಿಯ ಸೈನಿಕರನ್ನು ಯಾವುದೇ ಸಂದರ್ಭದಲ್ಲಿ ಮುರಾರಿರಾಯರನ್ನು ಬಿಟ್ಟು ಹೋಗುವ ಮನಸ್ಸೇ ಬರುತ್ತಿರಲಿಲ್ಲ. ಬದಲಿಗೆ ಇಡೀ ಸೇನೆ ಒಂದು ಕುಟುಂಬದಂತೆ ಅನ್ಯೋನ್ಯವಾಗಿರುತ್ತಿತ್ತು" ಎಂದಿರುವರು.

ಸೇನಾಧಿಕಾರಿಗಳನ್ನು ಆಯ್ಕೆ ಮಾಡುವಾಗ ಅವರ ಜಾಣ್ಮೆ ವಿಚಕ್ಷಣೆಗಳು ಮಿಗಿಲಾಗಿರುತ್ತಿದ್ದವು. ನೂರು ಕುದುರೆಗಳ ನಾಯಕನೆಂಬ ಇಡೀ ಸೈನ್ಯವನ್ನು ನಿಯಂತ್ರಿಸುವ ಸಾಮರ್ಥ್ಯವಳ್ಳವನಾಗಿರುತ್ತಿದ್ದನು. ಪ್ರತಿಯೊಬ್ಬರು ತಮ್ಮ ತಮ್ಮ ಸಾಧನೆಗಳಲ್ಲಿ ದಕ್ಷರು, ತೃಪ್ತರು, ಆಗಿರುತ್ತಿದ್ದರು. ಅಷ್ಟು ಮಾತ್ರವಲ್ಲ ಅವರೆಲ್ಲರೂ ಪರಸ್ಪರ ತುಂಬು ಸೌಹಾರ್ದವನ್ನು ಸಾಧಿಸಿದ್ದುದೆ ಅಲ್ಲದೆ ತಮ್ಮ ದಂಡನಾಯಕನಿಗೆ ಅತಿ ವಿದೇಯರು ಆಗಿರುತ್ತಿದ್ದರು. ಹೀಗಾಗಿ ಆ ಸಂದರ್ಭದಲ್ಲಿ ಈ ಯೋಧಪಡೆ ಇಡಿ ಹಿಂದೂಸ್ತಾನದಲ್ಲಿಯೇ ಅನುಪಮವಾದಂಥ ಅತ್ಯುತ್ತಮ ಪಡೆಯಾಗಿತ್ತು.[೩೧] ಈ ರೀತಿಯಲ್ಲಿ ಮುರಾರಿರಾವ್ ಘೋರ್ಪಡೆಯವರು ತಮ್ಮದೇ ಆದ ಘನ ವ್ಯಕ್ತಿತ್ವದಿಂದ ಜನ ಮಾನಸದಲ್ಲಿ ಶಾಶ್ವತವಾಗಿ ನೆಲೆನಿಂತ ವಿಭಿನ್ನ ವ್ಯಕ್ತಿಯಾಗಿ ಎಲ್ಲರಿಗೂ ಮಾದರಿಯಂತಿದ್ದರು. ಸೈನಿಕರೊಂದಿಗೆ ಇವರ ಭಾವನಾತ್ಮಕ ಸಂಬಂಧವು ಅವರನ್ನು ಮೇಲ್‌ಸ್ತರಕ್ಕೆ

ಕೊಂಡೊಯ್ಯುವಂತಿತ್ತು. ಒಟ್ಟಾರೆಯಾಗಿ ಇವರು ಒಂದು ಬಲಿಷ್ಠ ಸೈನಿಕ ತುಕಡಿಯನ್ನು ತಯಾರಿಸುವುದರ ಮೂಲಕ ಶತ್ರುಗಳಿಗೆ ಸಿಂಹ ಸ್ವಪ್ನರಾಗಿದ್ದರು ಎಂದರೆ ಅತಿಶಯೋಕ್ತಿ ಎನಿಸಲಾರದು.

**ದಂಡೆಯಾತ್ರೆಗಳು ಮತ್ತು ದಿಗ್ವಿಜಯಗಳು**

'ಗುತ್ತಿ'ಯು ಮುರಾರಿರಾಯರ ಅಧಿಕಾರದ ಕೇಂದ್ರಸ್ಥಾನವಾಗಿತ್ತು. ಇವರು ನಿಯಂತ್ರಿಸುತ್ತಿದ್ದ ಪ್ರದೇಶ ಧಾರವಾಡ ಜಿಲ್ಲೆಯ ಗಜೇಂದ್ರಗಡದಿಂದ ಕೊಪ್ಪಳದವರೆಗೆ ಸುಮಾರು ೨೫೦ ಕಿ.ಮೀವರೆಗೆ ಹಬ್ಬಿತ್ತು. ಈ ವ್ಯಾಪ್ತಿಯ ಪ್ರದೇಶವನ್ನು ತಮ್ಮ ಕಿರಿಯ ಸಹೋದರ ದೌಲತ್‌ರಾವ್ ಅವರಿಗೆ ವಹಿಸಿದ್ದರು. ಇದರ ಜೊತೆಗೆ ತಂದೆಯಾದ ಸಿದ್ದೋಜಿ ವಶಪಡಿಸಿಕೊಂಡಿದ್ದ ರಾಯಚೂರು ಜಿಲ್ಲೆಯ ಕೋಟೆಯು ಸೇರಿತ್ತು. ಬಳ್ಳಾರಿ ಜಿಲ್ಲೆಯ ಸೊಂಡೂರು ಮತ್ತು ಆನಂತಪುರ ಜಿಲ್ಲೆಯ ಗುತ್ತಿಯು ಇದಕ್ಕೆ ಸೇರ್ಪಡೆಯಾಗಿದ್ದವು.

ದಕ್ಷಿಣದ ಚಂದಾಸಾಹೇಬನ ವಿರುದ್ಧವಾಗಿ ಮರಾಠರ ಪರವಾಗಿ ಮುರಾರಿರಾಯ್ ಹೋರಾಡಿ ಅರ್ಕಾಟ್ ಮತ್ತು ತಿರುಚಿಗಳನ್ನು ಗೆದ್ದು ಕೊಟ್ಟನು. ಮುರಾರಿರಾಯನೆ ತಿರುಚಿಯ ರಾಜ ಪ್ರತಿನಿಧಿಯಾಗಿ ೧೭೭೪ರವರೆಗಿದ್ದ. ಈ ಸಮಯದಲ್ಲಿ ದೇವಾಲಯಗಳಿಗೆ ಜಾಗೀರು ನೀಡಿದ. ಮತ್ತೊಮ್ಮೆ ನಿಜಾಮ ಉಲ್ ಮುಲ್ಕ್ ತಿರುಚಿಗೆ ಮುತ್ತಿಗೆ ಹಾಕಿದಾಗ ಮರಾಠರ ನೆರವು ಬಾರದ್ದರಿಂದ ತಿರುಚಿಯನ್ನು ಬಿಟ್ಟುಕೊಟ್ಟು ಗುತ್ತಿ, ಪೆನುಕೊಂಡಗಳಿಗೆ ರಾಯನು ಸೀಮಿತವಾಗಬೇಕಾಯಿತು.[೬೨]

ಚಂದಾ ಸಾಹೇಬ್ ಫ್ರೆಂಚರ ಸಹಾಯದಿಂದ ತಿರುಚಿಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದ ಆದರೆ ಮಹಮ್ಮದ್ ಅಲಿಯ ಇಂಗ್ಲೀಷರ ಮತ್ತು ಮುರಾರಿರಾವ್‌ರ ಸಹಾಯ ಪಡೆದ ಮುರಾರಿರಾವ್ ಮತ್ತು ಮರಾಠರ ರಘುಜಿ ತಿರುಚಿನಾಪಳ್ಳಿ ಕೋಟೆಯನ್ನು ವೀಕ್ಷಿಸಿದರು. ಮರಾಠಿರಾವ್‌ರಿಗೆ ಯಾವಾಗಲೂ ಕಾರ್ಯಾಚರಣೆಯನ್ನು ಆದಷ್ಟು ಬೇಗ ಮತ್ತು ಖಚಿತವಾಗಿ ಮುಗಿಸಿ ಬಿಡುವೆವೋ ಎನ್ನುವ ಕಾತುರ. ಚಂದಾಸಾಹೇಬನ ಪರಿಸ್ಥಿತಿ ಅತಂತ್ರವಾಗಿತ್ತು. ಈ ಸಂದರ್ಭದಲ್ಲಿ ಚಂದಾಸಾಹೇಬ ವಿರೋಧಿಗಳೊಡನೆ ಒಪ್ಪಂದ ಮಾಡಲು ಪ್ರಯತ್ನ ಪಡುತ್ತಿದ್ದ ತನ್ನ ಜೀವದ ಅಪಾಯವನ್ನು ತಪ್ಪಿಸಲಿಕ್ಕೆ ೧೨ಲಕ್ಷ ರೂಪಾಯಿಗಳನ್ನು ಕೊಡಲು ತೀರ್ಮಾನಿಸಿದ. ಆದರೆ ಅದನ್ನು ಮರಾಠರು ಮತ್ತು ಮುರಾರಿರಾವ್ ಘೋರ್ಪಡೆ ಸೇರಿ ತಪ್ಪಿಸಿದರು. ಅವರೆಲ್ಲರನ್ನು ಬಂಧಿಸಿದ ಕೂಡಲೆ ಸಮರ್ಥ ವೀರ ಮುರಾರಿರಾವ್ ಅವರನ್ನು ತಿರುಚನಾಪಳ್ಳಿಯ ರಾಜ್ಯಪಾಲನಾಗಿ ನೇಮಿಸಲಾಯಿತು. ಈ ಅಧಿಕಾರದಲ್ಲಿ ಮುರಾರಿರಾವ್ ೧೭೪೧ರಿಂದ ೧೭೪೪ರವರೆಗೆ ಮುಂದುವರಿದರು.[೬೬]

ಈ ಅವಧಿ ಅವರಿಗೆ ಹೂವಿನ ಹಾಸಿಗೆಯೇನೂ ಆಗಿರಲಿಲ್ಲ. ಗಳಿಗೆ ಗಳಿಗೆಗೂ ಹೋರಾಟಗಳನ್ನು ಪ್ರತಿಕೂಲ ಸನ್ನಿವೇಶಗಳನ್ನು ಏಕಾಂಗಿಯಾಗಿ ಅವರು ಎದುರಿಸಬೇಕಾಗಿತು. ಈ ಆಡಳಿತಾವಧಿಯಲ್ಲಿ ಮುರಾರಿರಾವ್ ಅವರು ಶ್ರೀರಂಗಂ ದೇವಾಲಯಕ್ಕೆ ೫೭ ಹಳ್ಳಿಗಳನ್ನು ಜಹಗೀರಾಗಿ ಕೊಟ್ಟಿದ್ದರು. ಜಂಬು ಕೇಶ್ವರ ದೇವಾಲಯಕ್ಕೆ ೧೪ ಹಳ್ಳಿಗಳನ್ನು ತಿರುಚಿಯ ತಾಯಮನಸ್ವಾಮಿ ದೇವಾಲಯಕ್ಕೆ ೯ ಹಳ್ಳಿಗಳನ್ನು

ಉದಾರವಾಗಿ ನೀಡಿದ್ದನು.[೩೪] ನಿಜಾಂ ಉಲ್ ಮುಲ್ಕ್‌ಗೆ ಮುರಾರಿರಾವ್ ಅವರಲ್ಲಿ ಅತಿಶಯಗೌರವ ಮತ್ತು ಅಭಿಮಾನವಿತ್ತು. ಏಕೆಂದರೆ ಅವರೊಬ್ಬ ವೀರಯೋಧ ಮತ್ತು ನಿಪುಣ ರಾಜ್ಯನೀತಿಜ್ಞ ಎಂದು ಅವನಿಗೆ ಗೊತ್ತಿತ್ತು. ಹಾಗಾಗಿ ಮುರಾರಿರಾವ್ ಅವರನ್ನು ಗುತ್ತಿಯ ಸ್ವತಂತ್ರ ಆಳ ರಸನೆಂದು ಗುರುತಿಸುವುದರ ಜೊತೆಗೆ ಪೆನುಗೊಂಡ ಜಿಲ್ಲೆಯನ್ನು ಅವರಿಗೆ ಒಪ್ಪಿಸಿದ. ವರ್ಷಕ್ಕೆ ೨ ಲಕ್ಷರೂಪಾಯಿ ನಿಡುವುದಾಗಿ ಒಪ್ಪಿಕೊಂಡ. ಇಷ್ಟೆಲ್ಲಾ ಆದರೂ ೨೯.೦೮.೧೭೪೩ರಂದು ಅನೇಕ ಉಡುಗೊರೆ ಮತ್ತು ವಾಗ್ದಾನಗಳನ್ನು ಕೊಟ್ಟು ಗೌರವಿಸಿದ, ನಿಜಾಂಉಲ್‌ಮುಲ್ಕ್‌ರವರು ಮುರಾರಿರಾವ್ ಘೋರ್ಪಡೆಯವರಿಗೆ ತಿರುಚಿಯನ್ನು ಹಿಂದಕ್ಕೆ ಮರಳಿಸಿದರು. ಮುರಾರಿರಾವ್‌ರವರ ಗೌರವಕ್ಕಾಗಲಿ ಕೀರ್ತಿಗಾಗಲಿ ಎಳ್ಳಷ್ಟು ಭಂಗ ಬಾರದ ರೀತಿಯಲ್ಲಿ ಅವರು ಕೋಟೆಯನ್ನು ಕೊಟ್ಟು ಬಿಟ್ಟರು. ೧೭೪೩ರವರೆಗೆ ರಾಜ ಪ್ರತಿನಿಧಿಯಾಗಿ ಮುರಾರಿರಾವ್ ಇದ್ದನು.[೩೫]

೧೭೪೯ರಲ್ಲಿ ಸತಾರದಲ್ಲಿ ಶಾಹುವಿನ ಮರಣ ಸಂಭವಿಸಿತು. ತಂಜಾವೂರ್ ಕೋಟೆಯನ್ನು ಹಿಂತಿರುಗಿ ಪಡೆಯುವ ಯೋಜನೆಗಳನ್ನು ಮತ್ತೊಮ್ಮೆ ಜಾರಿಗೆ ತರುವ ಆಲೋಚನೆ ಚಂದಾ ಸಾಹೇಬನಲ್ಲಿ ಮೂಡಿತು. ತಂಜಾವೂರ್ ಸಿಂಹಾಸನದ ಮೇಲೆ ತನ್ನ ಸ್ವಂತ ಮಗನನ್ನು ಕೂರಿಸುವ ಪ್ರಯತ್ನ ಮಾಡಿದ. ೧೭೪೯ರಲ್ಲಿ ತಂಜಾವೂರ್ ಚಂದಾಸಾಹೇಬ್ ಮತ್ತು ಮುಜಫರ್‌ಜಂಗ್ ಇಬ್ಬರಿಂದಲೂ ಲೂಟಿಯಾಗಿತ್ತು.[೩೬]

ಇಂತಹ ಪರಿಸ್ಥಿತಿಯಲ್ಲಿ ಮುರಾರಿರಾವ್ ೧೭೪೯ರ ಕಡೆಯ ವೇಳೆಗೆ ಗುತ್ತಿಯಿಂದ ಹೊರಟರು. ೧೭೫೦ರಲ್ಲಿ ಕೋರಮಂಡಲ್ ಕರಾವಳಿಯನ್ನು ತಲುಪಿದರು. ೧೭೫೦ ಮಾರ್ಚ್‌ನಲ್ಲಿ ಮುರಾರಿರಾವ್‌ನಿಗೂ ಚಂದಾಸಾಹೇಬ್ ಮತ್ತು ಮುಜಾಫರ್‌ಜಂಗನಿಗೂ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಚಂದಾಸಾಹೇಬನ ಕಮ್ಯಾಂಡರುಗಳಾದ ಶೇಷರಾವ್ ಮತ್ತು ಶೇಖ್‌ಮಹಮ್ಮದ್ ಷರೀಪ್ ಹತ್ಯೆ ಗೀಡಾದರು. ಮುಂದೆ ಇವರಿಗೆ ಫ್ರೆಂಚರು ಸಹಾಯ ಮಾಡಿದರು. ಫ್ರೆಂಚರ ಮತ್ತು ಚಂದಾಸಾಹೇಬರ ಕುಟಿಲೋಪಾಯದಿಂದ Hollow Square ರಚಿಸಿ ಶತ್ರುವನ್ನು ನಾಶಮಾಡಲು ಸಿದ್ಧರಾದರು. ಇದೊಂದು ಪ್ರಾಣಾಂತಕವಾದ ಯುದ್ಧ ತಂತ್ರ ಫ್ರೆಂಚರ ಕುಟಿಲತೆಯಿಂದ ಮುರಾರಿರಾವ್ ವಿಧಿಯಿಲ್ಲದೆ ಈ ಚೌಕಸೇನಾದಲ್ಲಿ ಸಿಲುಕಿಕೊಂಡು ಬಿಟ್ಟರು. ಆದರೂ ಕಟ್ಟಾಳು ಮುರಾರಿರಾವ್ ಒಬ್ಬ ಪಳಗಿದ ಧೀರ ಯೋಧ. ಹಠಾತ್ತನೆ ಅಪರಮಿತ ಶೌರ್ಯದಿಂದ ಈ ದುರ್ಗಮ ವ್ಯೂಹದ ಮತ್ತೊಂದು ಪಾರ್ಶ್ವದೆಡೆಗೆ ಕೆಚ್ಚಿನಿಂದ ಮುನ್ನುಗಿ ವ್ಯೂಹವನ್ನು ಬೇಧಿಸಿ ಕಡೆಗೂ ಪಾರಾಗಬಿಟ್ಟ. ಈ ಸಾಹಸದಲ್ಲಿ ಅವನು ೯ ಯೋಧರನ್ನು ಕಳೆದುಕೊಳ್ಳಬೇಕಾಯಿತು. ಕೊನೆಗೆ ಅವರೊಂದಿಗೆ ಹೊರಾಡುತ್ತ ಅಟ್ಟಿಸಿಕೊಂಡು ಹೋಗಿ ಭಯಾನಕ ಯುದ್ಧದಲ್ಲಿ ತೊಡಗಿ ಅದರಲ್ಲಿ ಜಯಗಳಿಸಿದನು. ಇದು ಮುರಾರಿರಾವ್‌ಗೆ ತುಂಬಾ ಪ್ರಸಿದ್ಧಿಯನ್ನು ತಂದಿತು. ಚಂದಾಸಾಹೇಬ್ ಮತ್ತು ಫ್ರೆಂಚರು ಪಾಂಡಿಚೇರಿಗೆ ರಕ್ಷಣೆಗೆ ಓಡಿ ಹೋದರೆ ಮುಜಾಫರ್ ಜಂಗ್ ಶರಣಾಗಿ ಬಿಟ್ಟ.[೩೭]

ನಾಸಿರ್‌ಜಂಗ್ ಮತ್ತು ಡೂಪ್ಲಿಕ್ಸನಿಗೂ (Duplex) ಮಾತುಕತೆ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ಮುರಾರಿರಾವ್ ಪಾಂಡಿಚೇರಿಯ ಗಡಿಯಾಚೆ ಬೀಡುಬಿಟ್ಟಿದ್ದರು. ಮಾತುಕತೆ ಫಲಪ್ರಧವಾಗದ್ದರಿಂದ ಮುರಾರಿರಾವ್

ಮೇಲೆ ತಕ್ಷಣ ಅನಿರೀಕ್ಷಿತ ದಾಳಿಯನ್ನು ಕೂಡಲೆ ಮಾಡಬೇಕೆಂದು ಡೂಪ್ಲಿಕ್ಸ್‌ನು ಡಿ.ಲಾ ಟಚ್‌ನಿಗೆ ಆಜ್ಞೆಯನ್ನು ಮಾಡಿ ಬಿಟ್ಟ.[೬೮] ಇದರಿಂದ ಮೊಟ್ಟಮೊದಲಬಾರಿಗೆ ಮುರಾರಿರಾವ್ ಅವರ ರಕ್ಷಣಾ ನೆಲೆಯನ್ನು ಅನಿರೀಕ್ಷಿತವಾಗಿ ಆಕ್ರಮಿಸಿಬಿಡಲಾಯಿತು. ಏಕಾಏಕಿ ದಾಳಿಯಿಂದಾಗಿ ಸುಮಾರು ೧೨೦೦ ಜನರನ್ನು ಮುರಾರಿರಾವ್ ಕಳೆದುಕೊಳ್ಳಬೇಕಾಯಿತು. ಇದು ಅವರಿಗೆ ತೀರಾ ನೋವಿನ ಸಂಗತಿ. ಮುರಾರಿರಾವ್ ಹೀಗಾಗಿ ಕರಾವಳಿಯಿಂದ ಹಿಮ್ಮುಖರಾಗಿ ವೆಂಕಟಗಿರಿಗೆ ಹಿಂತಿರುಗಿ ಬಂದರು.

ತಂತ್ರ ನಿಪುಣ ಪ್ರೆಂಚರು ಮುರಾರಿರಾವ್ ಅವರೊಂದಿಗೆ ಮಾತುಕತೆ ಮಾಡಿಕೊಂಡರು. ಅಂತಿಮವಾಗಿ ಮುರಾರಿರಾವ್ ಮಹಮ್ಮದ್ ಅಲಿಯನ್ನು ಕೂಡಿಕೊಳ್ಳುವ ನಿರ್ಧಾರವನ್ನು ಮಾಡಿದರು. ಆದರೆ ಈ ವೇಳೆಗೆ ಮಹಮ್ಮದ್ ಅಲಿ ತಿರುಚಿಗೆ ಹೊರಟು ಹೋಗಿದ್ದ ಯಾಕೆಂದರೆ ೧೭೫೦ರ ಸೆಪ್ಟಂಬರ್‌ನಲ್ಲಿ ಫ್ರೆಂಚರು ಜಿಂಜಿಯನ್ನು ಆಕ್ರಮಿಸಿಯಾಗಿತ್ತು.[೬೯]

ಬ್ರಿಟಿಷರ ಮುಷ್ಠಿಯಲ್ಲಿದ್ದ ಅರ್ಕಾಟನ್ನು ವಶಪಡಿಸಿಕೊಳ್ಳಲು ಚಂದಾಸಾಹೇಬ್ ಸೂಕ್ತ ಸಮಯವನ್ನು ಕಾಯುತ್ತಿದ್ದರು. ಡ್ಯೂಪ್ಲಿಕ್ಸ್ ಮತ್ತು ಫ್ರೆಂಚರ ಸಹಾಯವನ್ನು ಪಡೆದನು ಆದರೆ ಮುರಾರಿರಾವ್ ಈ ಮುತ್ತಿಗೆಯಲ್ಲಿ ಮಧ್ಯೆ ಪ್ರವೇಶಿಸಿದನು. ಹೇಗೆ ಅಂದರೆ ಅತ್ಯದ್ಭುತ ಸೇನಾ ಪ್ರದರ್ಶನದೊಂದಿಗೆ ಹೋರಾಟದ ಕಣಕ್ಕೆ ಧೀಮಂತನಾಗಿ ಪ್ರವೇಶಿಸಿ ಬಿಟ್ಟಿದ್ದರು. ಮುರಾರಿ ರಾವ್ ಅವರ ಸಾಹಸದಿಂದ ಅಕಾಶವನ್ನು ವಶಪಡಿಸಿಕೊಂಡರು. ಮುತಾರಜಾ ಅಲಿಯನ್ನು ಅರ್ಕಾಟಿನ ನವಾಬನನ್ನಾಗಿ ನೇಮಿಸಿದ್ದರು.[೭೦]

೧೭೫೧ರ ಜನವರಿಯಲ್ಲಿ ಮುರಾರಿರಾವ್ ಪಾಂಡಿಚೇರಿಗೆ ಬಂದಾಗ ಉಬ್ಬಿಹೋದ ಡ್ಯೂಪ್ಲಿಕ್ಸ್ ಅವರಿಗೆ ಭವ್ಯ ಸ್ವಾಗತವನ್ನೇರ್ಪಡಿಸಿದ. ಕೊಂಬು ಕಹಳೆ ಸಂಭ್ರಮ ಉತ್ಸವದ ಉಲ್ಲಾಸ ಗೌರವ ಸಮರ್ಪಣೆ ಎಲ್ಲವೂ ಅದ್ದೂರಿಯಾಗಿ ವ್ಯವಸ್ಥಿತವಾಗಿತ್ತು. ಸತ್ಕಾರ ಸನ್ಮಾನಗಳನ್ನೇ ಫ್ರೆಂಚರು ಮುರಾರಿರಾವ್ ಅವರಿಗೆ ಪೂರೈಸಿ ಬಿಟ್ಟರೆಂದು ಆನಂದರಂಗ ಪಿಳ್ಳೈ ತಿಳಿಸುತ್ತಾರೆ.[೭೧]

ಇದೆಲ್ಲದರ ನಡುವೆ ಮುರಾರಿರಾವ್ ಸರ್ವ ಸನ್ನದ್ಧರಾಗಿ ತಿರುವಡಿಯ ಮೇಲೆ ಪ್ರಬಲ ದಾಳಿಯನ್ನು ನಡೆಸಿದರು. ತಿರುವಡಿ ಲಾರೆನ್ಸ್ ಹಾಗೂ ಬ್ರಿಟಿಷ್ ಫಿರಂಗಿದಳಗಳಿಂದ ಸುರಕ್ಷಿತವಾಗಿತ್ತು. ಆದರೆ ಮುರಾರಿ ರಾವ್ ಕೈಕಟ್ಟಿಕೊಡಲಿಲ್ಲ ಗುಂಡಿನ ಮಳೆಯನ್ನೇ ಸಿಡಿಸಿದ. ಈ ಸಂದರ್ಭದಲ್ಲಿ ಒಪ್ಪಂದದಂತೆ ಪ್ರೆಂಚರು ಮುರಾರಿ ರಾವ್‌ರಿಗೆ ಯಾವುದೇ ಸಹಾಯ ಮಾಡಲಿಲ್ಲ ಇದರಿಂದ ಮುರಾರಿರಾವ್ ಫ್ರೆಂಚರ ಹೇಡಿತನವನ್ನು ಉಗ್ರವಾಗಿ ಖಂಡಿಸಿದರು. ಮುರಾರಿರಾವ್ ಮತ್ತು ಅವರ ಸಂಗಡಿಗರು ನೇರವಾಗಿ ಬ್ರಿಟಿಷ್ ಬಂದೂಕವಲದೊಳಕ್ಕೆ ಲಗ್ಗೆ ಹಾಕಿದರು. ಈ ಕದನದಲ್ಲಿ ಭುಜಂಗರಾವ್ ಘೋರ್ಪಡೆ ಅವರು ಮೃತಪಟ್ಟರು ಜೊತೆಗೆ ಮುರಾರಿರಾವ್ ಅವರ ಕುದುರೆಗೂ ಗುಂಡಿನ ಪೆಟ್ಟುತಾಗಿ ಅದು ಮೃತ ಪಟ್ಟಿತು. ಕೊನೆಗೆ ಪ್ರೆಂಚರ ಡ್ಯೂಪ್ಲಿಕ್ಸ್ ಮುರಾರಿರಾವ್‌ಗೆ ಕುದುರೆಗಳನ್ನು ಮತ್ತು ವಿರೋಚಿತ ಪೋಷಾಕುಗಳನ್ನು ಅವರಿಗೆ ಕಳುಹಿಸಿದ ಆದರೆ ಈ ದಾಳಿ ಅಷ್ಟೊಂದು ಸಫಲವಾಗಲಿಲ್ಲ.

**ಮುರಾರಿರಾವ್ ಮತ್ತು ಹೈದರಾಲಿ-ಟಿಪ್ಪು**

ಮಹಮ್ಮದ್ ಅಲಿ ಮತ್ತು ಚಂದಾ ಸಾಹೇಬನ ನಡುವಿನ ಹೋರಾಟದಲ್ಲಿ ಹೈದರಾಲಿ ನಂಜರಾಜನ ಜೊತೆ ತಿರುಚಿಗೆ ಹೋಗಿದ್ದ. ಅಲ್ಲೆ ಮೊತ್ತ ಮೊದಲಬಾರಿಗೆ ಹೈದರಾಲಿ ಮುರಾರಿರಾವ್ ಅವರನ್ನು ಸಂದರ್ಶಿಸಿದ. ಹೈದರಾಲಿ ಹಲವಾರು ವರ್ಷಗಳ ತನ್ನ ಸಾಮರ್ಥ್ಯದಿಂದ ೧೭೭೧ರಲ್ಲಿ ಮಹಾರಾಜರಾಗಿ ವಿಜೃಂಭಿಸಿದ. ಹೈದರಾಲಿಯ ಸ್ಥಾನಮಾನ ಮತ್ತು ಸೇನಾ ಸಾಮರ್ಥ್ಯ ಆ ಹೊತ್ತಿಗೆ ಮುರಾರಿರಾವ್ ಅವರದಕ್ಕಿಂತ ಬಹುಪಾಲು ಹೆಚ್ಚಿಗೆಯೇ ಇತ್ತು. ಮುರಾರಿರಾವ್ ಪರಿಸ್ಥಿತಿಯನ್ನು ಕೂಲಂಕಷವಾಗಿ ಅವಲೋಕಿಸುತ್ತಿದ್ದುದೇ ಅಲ್ಲದೇ ಜತೆಜತೆಗೆ ಪೇಶ್ವೆಗಳೊಂದಿಗೆ ಮೈತ್ರಿಯನ್ನು ಸಂಪಾದಿಸುತ್ತಿದ್ದ.[೪೨]

ಈ ಸಂದರ್ಭದಲ್ಲಿ ಇಡೀ ಡೆಕ್ಕನ್ನಿನಲ್ಲಿ ಬಹುಶಃ ಮುರಾರಿರಾವ್ ಒಬ್ಬರೆ ಹೈದರಾಲಿಯನ್ನು ನಿರ್ಭಯವಾಗಿ ಪ್ರತಿಭಟಿಸುತ್ತಿದ್ದರು. ಒಂದು ಸಮಯದಲ್ಲಿ ತಿರುಚಿಯನ್ನು ಮೈಸೂರಿಗೆ ಒಪ್ಪಿಸಬೇಕಾಗಿತ್ತು. ಆ ಸಂದರ್ಭದಲ್ಲಿ ನಂಜರಾಜ ಮುರಾರಿರಾವ್‌ರನ್ನು ಮೈಸೂರಿಗೆ ಕರೆಸಿಕೊಂಡರು. ಜೊತೆಗೆ ಮುರಾರಿರಾಯರನ್ನು ಕೊಲ್ಲಲು ತಂತ್ರ ಹೂಡಿದ ಆಗ ನಂಜರಾಜನ ಯುವ ಸೇನಾಧಿಪತಿಯಾಗಿದ್ದ ಹೈದರಾಲಿಯು ತಂತ್ರದ ಸುಳುವು ಹಿಡಿದು ಮೊದಲ ದ್ವಾರಬಾಗಿಲಲ್ಲೇ ತಡೆಹಿಡಿದು ಮುರಾರಿರಾವ್ ಅವರ ಪ್ರಾಣ ಉಳಿಯುವಂತೆ ಮಾಡಿದ ಫ್ರೆಂಚರು ಮಧ್ಯಪ್ರವೇಶಿಸಿ ನಂಜರಾಜನಿಗೆ ತಿರುಚಿಯನ್ನು ಕೊಡಿಸಿ ಮುರಾರಿರಾಯರನ್ನು ಸನ್ಮಾನಿಸಿದರು.[೪೩]

ತಿರುವಾಡಿಯ ಯುದ್ಧದಲ್ಲಿ ರಾಯನ ನೆರವಿಗೆ ಫ್ರೆಂಚರು ಬರದೇ ಇದ್ದುದರಿಂದ ತಿರುಚಿಯನ್ನು ಇಂಗ್ಲೀಷರು ವಶಮಾಡಿಕೊಂಡಾಗ ರಾಯನಿಗೆ ಅವರ ಬಗ್ಗೆ ಬೇಸರವಾಗಿ ಇಂಗ್ಲೀಷರ ಸ್ನೇಹ ಹಸ್ತವನ್ನು ಮನ್ನಿಸಿ ಸ್ವೀಕರಿಸಿದ. ಅಷ್ಟು ಹೊತ್ತಿಗೆ ಹೈದರಾಲಿ ಪ್ರಬಲವಾಗಿ ಮುರಾರಿರಾಯನ ವಿರುದ್ಧ ಕತ್ತಿಮಸೆಯತೊಡಗಿದ.[೪೪] ಕರ್ನಾಟಕದ ಪಾಳೆಯಗಾರರನ್ನೆಲ್ಲಾ ವಶಪಡಿಸಿಕೊಂಡು ಮೆರೆಯುತ್ತಿದ್ದ ಹೈದರಾಲಿಗೆ ಗುತ್ತಿಯ ಮುರಾರಿರಾಯ ಘೋರ್ಪಡೆ ಮಣಿಯಲಿಲ್ಲ.

ಮುರಾರಿಯರು ವ್ಯವಹಾರಗಳ ವಿಷಯದಲ್ಲಿ ದಣಿವಿಲ್ಲದ ಬಾತ್ಮೀದಾರ. ಪುಣೆ ಮತ್ತು ಕೋಲ್ಲಾಪುರದ ಮರಾಠ ಆಸ್ಥಾನಗಳೊಂದಿಗೆ ನಿಜಾಮ ನವಾಬರುಗಳೊಂದಿಗೆ ಮದರಾಸು ಮತ್ತು ಪಾಂಡಿಚೇರಿಯಲ್ಲಿದ್ದ ಇಂಗ್ಲೀಷ್ ಹಾಗೂ ಫ್ರೆಂಚರೊಂದಿಗೆ ಇವರ ನಿಪುಣ ಬೇಹುಗಾರರು ಸತತ ಸಂಪರ್ಕವನ್ನು ಇಟ್ಟುಕೊಂಡಿದ್ದರು. ತಮ್ಮ ಸ್ವಂತ ಅಧಿಕಾರವನ್ನು ಉಳಿಸಿಕೊಳ್ಳಲು ಮುರಾರಿರಾವ್ ಈ ಶಕ್ತಿಗಳೊಂದಿಗೆ ಸಮನ್ವಯ ಸಾಧಿಸಿಕೊಳ್ಳಲೇಬೇಕಿತ್ತು.[೪೫] ಪರಿಸ್ಥಿತಿ ಹೀಗಿರುವಾಗ ಮುರಾರಿರಾವ್ ಅವರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಬೇಕು ಅಥವಾ ಅವರನ್ನು ಮುಗಿಸಬೇಕು ಎಂಬ ಚಿಂತೆ ಹೈದರಾಲಿಗೆ ಬಂದಿತ್ತು.

ಹೈದರಾಲಿ ಕರ್ನಾಟಕದ ಹಲವಾರು ಪಾಳೆಯಗಾರರನ್ನು ಆಕ್ರಮಣ ಮಾಡಿದ್ದ. ಆಕ್ರಮಣಕ್ಕೊಳಗಾಗಿದ್ದ ಪಾಳೆಯಗಾರರಿಗೆ ನೆರವು ನೀಡಲು ಮುರಾರಿರಾವ್ ನಿರ್ಧರಿಸಿದ. ಯುದ್ಧ ರಂಗದಲ್ಲಿ ಮುರಾರಿರಾವ್‌ರನ್ನು

ಸೋಲಿಸಲು ಹೊಂಚು ಹಾಕುತ್ತಿದ್ದ. ಮುರಾರಿರಾವ್ ಚಿಕ್ಕಬಳ್ಳಾಪುರದ ಆಕ್ರಮಣವನ್ನು ತಡೆಗಟ್ಟಲು ೨೫೦೦ ದಳಗಳೊಂದಿಗೆ ಶಿವರಾವ್ ಘೋರ್ಪಡೆ ಮತ್ತು ಖಂಡೇರಾವ್ ಘೋರ್ಪಡೆ ಅವರುಗಳನ್ನು ಕಳಿಸಿಕೊಟ್ಟರು. ಈ ಹೋರಾಟದಲ್ಲಿ ಇವರು ಸೋಲನ್ನು ಅನುಭವಿಸಿದರು. ಮುರಾರಿರಾವ್ ಇಂಥದ್ದೆ ಇನ್ನೊಂದು ಪ್ರಯತ್ನ ಮಾಡಿದರು. ಆದರೆ ಮತ್ತೆ ಸೋತು ಹೋದರು ಮುಂದೆ ಹೈದರಾಲಿ ಮತ್ತು ಮುರಾರಿರಾವ್‌ಗೆ ಶಾಂತಿ ಒಪ್ಪಂದ ಮಾಡಿಕೊಂಡರು. ಏಳು ಲಕ್ಷ ರೂಪಾಯಿ ಮುರಾರಿರಾವ್ ಮೂರು ಕಂತುಗಳಲ್ಲಿ ಹೈದರಾಲಿಗೆ ಸಲ್ಲಿಸಬೇಕೆಂದು ಸಂಧಾನವಾಯಿತು. ಮೊದಲ ಕಂತು ಸಂದಾಯವಾದ ಕೂಡಲೇ ಹೈದರಾಲಿ ಮೈಸೂರಿಗೆ ಹಿಂತಿರುಗಿ ಹೋದ ಕೂಡಲೆ ಮುರಾರಿರಾವ್ ಅಲ್ಲಿಂದ ತಪ್ಪಿಸಿಕೊಂಡು ನಂದಿದುರ್ಗಕ್ಕೆ ಓಡಿಹೋದ, ಇದರಿಂದ ಮೋಸಹೋದ ಹೈದರಾಲಿ ಉಗ್ರವಾಗಿ ಕೆರಳಿಬಿಟ್ಟ.[೪೬] ಮುಂದೆ ಹೈದರಾಲಿ ಮುರಾರಿರಾವ್‌ರ ಅನೇಕ ಮುಖ್ಯ ಅಧಿಕಾರಿಗಳನ್ನು ಸೆರೆ ಹಿಡಿದು ಕರೆದೊಯ್ಯಲಾಯಿತು. ಅವರಲ್ಲಿ ಖಂಡೇರಾವ್ ಘೋರ್ಪಡೆ ಸಹ ಇದ್ದರು. ಪ್ರಸ್ತುತ ಪರಿಸ್ಥಿತಿಯಲ್ಲಿ ಹೈದರಾಲಿ ಮುರಾರಿರಾವ್‌ಗೆ ಪ್ರಬಲ ಶತೃವಾಗಿ ಪರಿಣಮಿಸಿದ.

ಹೈದರಾಲಿಯು ಮುರಾರಿರಾವ್ ಅವರ ಅನೇಕ ಗಡಿ ಕಾವಲು ದಳಗಳನ್ನು ಆಕ್ರಮಿಸಿದ್ದರು. ೧೭೬೯ರ ಅಕ್ಟೋಬರ್ ತಿಂಗಳಲ್ಲಿ ಹೈದರಾಲಿಯು ಸ್ನೇಹ ಹಸ್ತವನ್ನು ಬಯಸಿ ಸಂದೇಶವನ್ನು ಕಳುಹಿಸಿದ. ಹೈದರಾಲಿ ಮುರಾರಿರಾವ್ ಅವರನ್ನು ವೈಯುಕ್ತಿಕವಾಗಿ ಸಂದರ್ಶಿಸುವ ಅಭಿಲಾಷೆಯನ್ನು ವ್ಯಕ್ತಪಡಿಸಿದ. ಆದರೆ ಈ ಸಂದರ್ಶನದಲ್ಲಿ ಮುರಾರಿರಾಯರಿಗೆ ಅಪಾಯ ಕಾದಿತ್ತು. ಈ ವಿಷಯವನ್ನು ಅವರ ಹಳೆಯ ಸ್ನೇಹಿತನಾದ ಗೋಪಾಲರಾವ್ ಪಟವರ್ಧನ್ ತಿಳಿಸಿದ. ಗೋಪಾಲರಾವ್ ಎಷ್ಟು ಎಚ್ಚರಿಸಿದ್ದರೂ ಮುರಾರಿರಾವ್ ಅಪಾಯವನ್ನು ಲಕ್ಷ್ಯಮಾಡಲಿಲ್ಲ. ವಯಸ್ಸು ಎಪ್ಪತ್ತು ಸಮೀಪಿಸುತ್ತಿದ್ದರೂ. ಅವರ ಸಾಹಸ ಪ್ರವೃತ್ತಿಗೆ ಮಾತ್ರ ಎಳ್ಳಷ್ಟು ಮುಪ್ಪಡರಿರಲಿಲ್ಲ. ಆದರೂ ಮುರಾರಿರಾವ್ ಸನ್ನಿವೇಶವನ್ನು ಕೂಲಂಕಷವಾಗಿ ಗ್ರಹಿಸಿದ್ದರು. ಒಂದು ವೇಳೆ ದುಷ್ಕೃತ್ಯಗಳೇನಾದರೂ ಸಂಭವಿಸಿದರೆ ಇರಲೆಂದು ಶಿವರಾವ್ ಘೋರ್ಪಡೆ ಅವರ ನೇತೃತ್ವದಲ್ಲಿ ಒಂದು ಸೇನೆ ಸಜ್ಜುಗೊಂಡಿತ್ತು. ಈ ಸೇನೆ ಮುರಾರಿರಾವ್ ಸಹಾಯಕ್ಕೆ ಧಾವಿಸಲು ಸನ್ನದ್ಧವಾಗಿತ್ತು. ಆದರೆ ಯಾವುದೇ ದುಷ್ಪರಿಣಾಮಗಳು ಉಂಟಾಗಲಿಲ್ಲ. ಈ ವೀರವೃದ್ಧ ಯೋಧನನ್ನು ಹೈದರಾಲಿ ಅತಿಶಯ ಗೌರವದಿಂದಲೇ ಸ್ವಾಗತಿಸಿದ. ಅವರ ಬಲವನ್ನು ಸಂಪಾದಿಸುವ ಸಲುವಾಗಿ ಉಡುಗೊರೆಗಳ ರಾಶಿಯನ್ನು ಸಮರ್ಪಿಸಿ ಬಿಟ್ಟ. ಈ ಮಧ್ಯೆ ಶಿವರಾವ್ ಘೋರ್ಪಡೆ ಅವರ ಸಹಾಯವನ್ನು ಹೈದರಾಲಿ ಕೇಳಿಕೊಂಡ. ಮುರಾರಿರಾವ್ ಇದನ್ನು ಸಂಪೂರ್ಣವಾಗಿ ನಿರಾಕರಿಸಿಬಿಟ್ಟ. ಮಾತುಕತೆ ಹೀಗೆ ವಿಫಲವಾಗಿ ಹೈದರಾಲಿ ಸವಣೂರಿನತ್ತ, ಮುರಾರಿರಾವ್ ಗುತ್ತಿ ಸಂಸ್ಥಾನದತ್ತ ನಡೆದುಬಿಟ್ಟರು.[೪೭]

ಮಾದವರಾವ್ ಪೇಶ್ವೆ ೧೭೬೯ರಂದು ೭೫೦೦೦ ಸೇನೆಯೊಂದಿಗೆ ಪುಣೆಯಿಂದ ಮೈಸೂರಿನ ಕಡೆ ಹೊರಟ. ತುಂಗಭದ್ರನದಿ ದಾಟುತ್ತಿದಂತೆಯೇ ಮುರಾರಿರಾವ್ ಘೋರ್ಪಡೆ ೫೦೦೦ ಅಶ್ವದಳ, ೩೦೦೦ ಸೇನಾಪಡೆಯೊಂದಿಗೆ ಅವನನ್ನು ಕೂಡಿಕೊಂಡರು. ಮಾಧವರಾವ್ ಪೇಶ್ವೆ ಅವರ ಆರೋಗ್ಯ ಕುಗ್ಗಿ

ಹೋಗಿದ್ದರೂ. ಮುರಾರಿರಾವ್ ಅವರ ಅಪ್ರತಿಮ ಸಾಹಸದಿಂದ ೧೭೭೦ರಲ್ಲಿ ಹೈದರಾಲಿಗೆ ಸಂಪೂರ್ಣವಾಗಿ ಸೋಲಾಯಿತು. ಇದರಿಂದ ಪೇಶ್ವೆ ಮಾಧವರಾವ್‌ಗೆ ಸಾಕಷ್ಟು ಲಾಭ ಕೂಡ ಆಯಿತು.[೪೮]

೧೭೭೪ರಲ್ಲಿ ಹೈದರಾಲಿ ಮತ್ತು ಟಿಪ್ಪು ಸೇರಿಕೊಂಡು ಮತ್ತೊಮ್ಮೆ ಮರಾಠರ ಮೇಲೆ ದಾಳಿ ಮಾಡಲು ಹೊರಟರು ಪೇಶ್ವೆ ರಘುನಾಥರಾಯನು ಅವರ ವಿರುದ್ಧ ಹೋರಾಡಿದರು ಕೊನೆಗೆ ಹೈದರಾಲಿಗೆ ಶರಣಾದನು.[೪೯]

ಹೈದರಾಲಿ ಇದೀಗ ಪೂರ್ವ ಪ್ರಾಂತ್ಯಗಳ ಕಡೆಗೆ ತನ್ನ ಗಮನವನ್ನು ತಿರುಗಿಸಿದ. ಬಳ್ಳಾರಿ ಮತ್ತು ಕರ್ನೂಲುಗಳನ್ನು ತನ್ನ ಸ್ವಾಧೀನಕ್ಕೆ ಪಡೆದುಕೊಂಡ ನಂತರ ಕರ್ನೂಲಿನ ನವಾಬನಿಂದ ೩ ಲಕ್ಷ ರೂಪಾಯಿ ಕಪ್ಪವನ್ನು ಪಡೆದುಕೊಂಡ. ಮುರಾರಿರಾಯನು ಹೈದರನಿಗೆ ಕಪ್ಪ ಕೊಡಲು ನಿರಾಕರಿಸಿದನು. ಆಗ ಹೈದರನು ಗುತ್ತಿ ಸಂಸ್ಥಾನದ ಕಡೆ ದಂಡೆತ್ತಿ ಹೋಗಲು ನಿಶ್ಚಯಿಸಿದ. ಹೈದರಾಲಿ ತಮ್ಮ ಕಡೆಗೆ ಧಾವಿಸಿ ಬರುತ್ತಿರುವುದನ್ನು ಮನಗಂಡು ಮುರಾರಿರಾವ್ ಕೋಟೆಯಲ್ಲಿದ್ದ ತಮ್ಮ ಕುಟುಂಬದ ಮತ್ತು ಇನ್ನಿತರ ದಂಡನಾಯಕರುಗಳ ಕುಟುಂಬದ ಮಹಿಳೆಯರನ್ನು ಮಡಕಶಿರಾದ ಕೋಟೆಗೆ ಕಳುಹಿಸಿದ. ಇದು ಗುತ್ತಿಯಿಂದ ೧೬೦ ಕಿ.ಮೀ.ದೂರದಲ್ಲಿದೆ. ಪರಿವಾರದ ಮಹಿಳೆಯರನ್ನು ತಮ್ಮ ಬಂಧು ಶಿವರಾವ್ ಘೋರ್ಪಡೆ ಅವರ ಬೆಂಗಾವಲಲ್ಲಿ ಕಳುಹಿಸಿಕೊಟ್ಟು, ನಂತರ ಮುರಾರಿರಾವ್ ಹೈದರ್‌ನ ದಾಳಿಯನ್ನು ನಿರೀಕ್ಷಿಸುತ್ತಾ ಗುತ್ತಿಕೋಟೆಯಲ್ಲಿ ಉಳಿದರು. ಗುತ್ತಿಯನ್ನು ರಕ್ಷಿಸಿಕೊಳ್ಳುತ್ತೇನೆ ಎಂಬ ಅಪಾರ ಭರವಸೆ ಅವರಿಗೆ ಇತ್ತು. ಕೋಟೆಯನ್ನು ಸಂರಕ್ಷಿಸಿಕೊಳ್ಳಲು ಅವರ ಬಳಿ ಆಯ್ದ ೪೦೦೦ ದಕ್ಷ ಸೈನಿಕರಿದ್ದರು.

ನಿರೀಕ್ಷಿಸಿದಂತೆ ಹೈದರಾಲಿ ೨೫೦೦೦ ಸೈನಿಕರೊಂದಿಗೆ ಧಾವಿಸಿ ೧೭೭೫ರ ಡಿಸೆಂಬರ್‌ನಲ್ಲಿ ಗುತ್ತಿ ಕೋಟೆಗೆ ಮುತ್ತಿಗೆ ಹಾಕಿದ. ಇಲ್ಲಿಂದ ಮುಂದೆ ಹೈದರಾಲಿಗೆ ತನ್ನ ಪರವಾಗಿ ಪ್ರತಿಯೊಂದು ವಿಷಯದಲ್ಲಿ ಅವನಿಗೆ ಅನುಕೂಲವಾಯಿತು. ಗುತ್ತಿಯ ಪರಿಸ್ಥಿತಿ ದಿನೇ ದಿನೇ ಬಿಗಡಾಯಿಸುತ್ತಲೇ ಹೋಯಿತು. ಅತ್ತ ಮರಾಠರ ಸಹಾಯಕೇಳಿದ ಮುರಾರಿರಾಯ ಯಾವುದೇ ಮರಾಠ ದಳಗಳು ಹೊರಟುಬರುವ ಸೂಚನೆ ಕಂಡುಬರಲಿಲ್ಲ. ಕೊನೆಗೆ ಗುತ್ತಿ ಕೋಟೆ ಮುತ್ತಿಗೆಯು ೨ ತಿಂಗಳುಗಳ ನಂತರ ಕದನ ವಿರಾಮದ ಮಾತುಕತೆ ಸಭೆಗಳು ನಡೆದವು. ಮುರಾರಿರಾಯರು ಹೈದರನಿಗೆ ೧೨ಲಕ್ಷ ರೂಗಳು ಕೊಡಲು ಒಪ್ಪಿಕೊಂಡನು. ಅದರಂತೆಯೆ ೬ ಲಕ್ಷ ರೂಗಳ ಮೊತ್ತವನ್ನು ಆಭರಣಗಳ ರೂಪದಲ್ಲಿ ಉಳಿದ ೬ ಲಕ್ಷ ರೂಪಾಯಿಗಳಿಗೆ ಒತ್ತೆಯಾಳುಗಳನ್ನು ನಿಯೋಜಿಸುವುದಾಗಿಯೂ ಮುರಾರಿರಾವ್ ಹೇಳಿದರು. ಇದನ್ನು ಹೈದರಾಲಿ ಒಪ್ಪಿಕೊಂಡನು.

ಹೈದರಾಲಿಗೆ ಕಳುಹಿಸಿಕೊಟ್ಟಿದ್ದ ಆಭರಣಗಳ ಮೊತ್ತ ಕೇವಲ ೬೦.೦೦೦ಗಳಿಗೆ ಸಮವಿತ್ತು ಇದರಿಂದ ಹೈದರಾಲಿ ಕಂಗಲಾಗಿಬಿಟ್ಟ. ಮತ್ತೊಮ್ಮೆ ಮುರಾರಿರಾಯರ ಮೇಲೆ ದಾಳಿ ಮಾಡಲು ಹೊರಟ ಆದರೆ ಈ ಭಾರಿ ಮುರಾರಿರಾಯನಿಗೆ ಅನಾಹುತ ಕಾದಿತ್ತು. ಹೈದರಾಲಿಯು ಘೋರ್ಪಡೆ ಮನೆತನದ ದೇಶಾಭಿಮಾನದ ಸಂಕೇತವಾದ ಕಪ್ಪು ಬಿಳುಪು ಭಾವಟವನ್ನು ಎಳೆದುಹಾಕಲಾಯಿತು. ಇದರಿಂದ ಒಂದು ಧೀಮಂತ ಅಧ್ಯಾಯವೇ ಕಳಚಿಕೊಂಡು ಬಿಟ್ಟಂತಾಯಿತು. ಆ ಕರಾಳ ದಿನ ೧೭೭೬ರ ಮಾರ್ಚ್ ೧೫. ಮುಂದಿನ ಎರಡು ವಾರಗಳಲ್ಲಿ ಗುತ್ತಿಯಲ್ಲಿ ಹೈದರಾಲಿಯು ನಿಧಿಯನ್ನು ಹುಡಕಲು ತೊಡಗಿದ. ಮುರಾರಿರಾಯರು

ತನ್ನ ಸೈನ್ಯದೊಂದಿಗೆ ಎರಡು ತಿಂಗಳುಗಳ ಕಾಲ ಹೈದರನ ಆಕ್ರಮಣವನ್ನು ಎದುರಿಸಿದ ಕೊನೆಗೆ ಸೋತು ಸೆರೆಯಾದ ಮುರಾರಿರಾವ್ ಅವರನ್ನು ೧೭೭೭ರಲ್ಲಿ ಕಬ್ಬಲ ದುರ್ಗದಲ್ಲಿ ಗಲ್ಲಿಗೇರಿಸಲಾಯಿತು.[೫೦] ಒಂದು ಮೂಲದ ಪ್ರಕಾರ ಮುರಾರಿರಾಯರು ೧೭೭೭ರ ಮಧ್ಯಭಾಗ ಅಥವಾ ಕಡೆಯ ಭಾಗದವರೆಗೂ ಅವರು ಬದುಕಿದ್ದಿರಬಹುದಾದರು ಅವರ ದರ್ಶನ ಮಾತ್ರ ಯಾರೊಬ್ಬರಿಗೂ ಲಭ್ಯವಾಗಲಿಲ್ಲ. ಮರಾಠ ದಂಡನಾಯಕ ಹರಿಪಂಥ್ ಫಡ್ಕೆ, ಮುರಾರಿರಾವ್ ಘೋರ್ಪಡೆ ಮತ್ತಿತರರ ಬಿಡುಗಡೆಗಾಗಿ ಹೈದರಾಲಿಗೆ ದೊಡ್ಡ ಮೊತ್ತದ ಆಮಿಷವನ್ನು ತೋರಿಸಿದ ಆದರೆ ಹೈದರಾಲಿ ಈ ಪ್ರಸ್ತಾಪವನ್ನು ತುಂಬಾ ಒರಟಾಗಿ ತಿರಸ್ಕರಿಸಿದ. ಪಟವರ್ಧನರುಗಳನ್ನು ಬೇಕಾದರೆ ಬಿಡುತ್ತೇನೆ. ಆದರೆ ಮುರಾರಿರಾವ್ ಅವರನ್ನು ಮಾತ್ರ ಬಿಡುವುದಿಲ್ಲ ಎಂದು ತಿರಸ್ಕರಿಸಿದ. ಹೀಗೆ ಸುಮಾರು ೫೦ ವರ್ಷಗಳ ಕಾಲ ಸಂಕೀರ್ಣ ರಾಜಕೀಯ ಸಂಘರ್ಷಗಳ ನಡುವೆ ಧೀರನಾಗಿ ಸ್ವತಂತ್ರವಾಗಿ ಉಳಿದಿದ್ದ ಒಬ್ಬ ವೀರನ ಅಂತ್ಯ ದುರಂತವಾಯಿತು. ಘೋರ್ಪಡೆಯವರ ಗುತ್ತಿ ಹೈದರಾಲಿಯ ವಶವಾಗಿ ಚರಿತ್ರೆಯಲ್ಲಿ ಸೇರಿಹೋಯಿತು.

ಮುರಾರಿರಾಯನಿಗೆ ಮಕ್ಕಳಿಲ್ಲದಿದ್ದರಿಂದ ಗೋಪಾಲರಾವ್‌ರ ಮಗ ಶಿವರಾಯನನ್ನು ದತ್ತು ತೆಗೆದುಕೊಂಡನು. ಹೈದರಾಲಿ ಸೊಂಡೂರನ್ನು ಪಡೆದ ನಂತರ ಗುತ್ತಿಯನ್ನು ೧೭೭೯ರಲ್ಲಿ ಆಕ್ರಮಿಸಿದನು. ಹೈದರನು ಎರಡನೇ ಆಂಗ್ಲೋ ಮೈಸೂರು ಯುದ್ಧ ಬ್ರಿಟಿಷರ ವಿರುದ್ಧ ಮಾಡುವಾಗ ೧೭೮೨ರ ಡಿಸೆಂಬರ್ ೭ರಂದು ಮರಣ ಹೊಂದಿದನು.[೫೧] ಮುಂದೆ ಟಿಪ್ಪುಸುಲ್ತಾನ ತಂದೆ ಹೈದರಾಲಿಯ ನೀತಿಯನ್ನೇ ಅನುಸರಿಸಿದನು. ೧೭೮೫ರಲ್ಲಿ ಟಿಪ್ಪು ಸೊಂಡೂರಿಗೆ ಬಂದನು. ಶಿವರಾವ್‌ನ ವಿರುದ್ಧ ಯುದ್ಧ ಮಾಡಿ ಶಿವರಾವನನ್ನು ಕೊಲೆ ಮಾಡುತ್ತಾನೆ. ಟಿಪ್ಪು ಈ ಪ್ರದೇಶಗಳನ್ನು ವಶಪಡಿಸಿಕೊಂಡು ಬಳ್ಳಾರಿ ಮತ್ತು ಸೊಂಡೂರಿನ ಕೃಷ್ಣನಗರದಲ್ಲಿ ಕೋಟೆಗಳನ್ನು ಕಟ್ಟಿಸಿದ.[೫೨] ಆದರೆ ಟಿಪ್ಪು ಆಡಳಿತ ಸೊಂಡೂರಿಗೆ ಕೆಲವೇ ದಿನಗಳಿಗೆ ಸೀಮಿತವಾಗಿತ್ತು. ಏಕೆಂದರೆ ಶಿವರಾವನ ಸಹೋದರ ವೆಂಕಟರಾವ್ ಟಿಪ್ಪುವಿನ ವಿರುದ್ಧ ಹೋರಾಡಿ ಮತ್ತೆ ಸೊಂಡೂರನ್ನು ವಶಪಡಿಸಿಕೊಳ್ಳುತ್ತಾನೆ. ಟಿಪ್ಪು ಮುಂದೆ ಶ್ರೀರಂಗಪಟ್ಟಣದ ಅವನತಿ ಆಗುವವರೆಗೂ ಸೊಂಡೂರನ್ನು ಗೆಲ್ಲಲು ಆಗಲಿಲ್ಲ.[೫೩]

ಅಪ್ರಾಪ್ತ ವಯಸ್ಸಿನ ಸಿದ್ಧೋಜಿರಾವ್ ಅಧಿಕಾರಕ್ಕೆ ಬರುತ್ತಾನೆ. ಆದರೆ ಆತನು ಕೇವಲ ೧೩ನೇ ವಯಸ್ಸಿನಲ್ಲಿ ಮರಣ ಹೊಂದುತ್ತಾನೆ. ಮತ್ತೊಮ್ಮೆ ದತ್ತವಾಡದಿಂದಲೇ ಖಂಡೇರಾಯನ ಮಗ ೨ನೇ ಶಿವರಾಯನನ್ನು ಸೊಂಡೂರಿಗೆ ದತ್ತು ತೆಗೆದುಕೊಳ್ಳಲಾಯಿತು. ೨ನೇ ಶಿವರಾಯ ಮತ್ತು ವೆಂಕಟರಾಯ ಸೇರಿ ಸೊಂಡೂರನ್ನು ಪ್ರಬಲಗೊಳಿಸಿದರು.[೫೪]

ಮರಾಠರ ಪೇಶ್ವೆಯಾದ ೨ನೇ ಬಾಜಿರಾಯ ಸೊಂಡೂರನ್ನು ಆಕ್ರಮಿಸಲು ಪ್ರಯ್ನಿಸಿದ. ಕುಮಾರ ಸ್ವಾಮಿಯ ದರ್ಶನದ ನೆಪದಲ್ಲಿ ಸೈನ್ಯದೊಡನೆ ಬಂದ ಆದರೆ ೨ನೇ ಶಿವರಾಯನು ಸೈನ್ಯವನ್ನು ಗುಡ್ಡದ ಹೊರಗೇ ಬಿಟ್ಟು ಒಬ್ಬನೇ ದರ್ಶನಕ್ಕೆ ಬರಲು ಹೇಳಿದ. ಅದರಂತೆ ಬಾಜೀರಾಯ ಬಂದು ದರ್ಶನಕ್ಕೆ ಹೋದಾಗ ಒಂದು ಗುಂಡು ಮೇಲಿಂದ ಉರುಳುತ್ತಾ ಅವರ ಹತ್ತಿರವೇ ಬಿತ್ತು. ಬಾಜೀರಾಯ ಭಯದಿಂದ ಕುಮಾರಸ್ವಾಮಿಯ ದರ್ಶನ ಪಡೆಯದೆ ಮರಳಿಹೋದ.[೫೫]

೧೮೧೭ರಲ್ಲಿ ಇಂಗ್ಲೀಷರ ಸಹಾಯದೊಂದಿಗೆ ಮತ್ತೊಮ್ಮೆ ಸೊಂಡೂರಿನ ಮೇಲೆ ಬಾಜೀರಾಯ ಆಕ್ರಮಣ ಮಾಡುತ್ತಾನೆ. ಆದರೆ ಸೊಂಡೂರನ್ನು ಆಕ್ರಮಿಸಿಕೊಂಡರೂ ಇಂಗ್ಲೀಷರಿಗೆ ಪೇಶ್ವೆಯರಿಗೆ ಆದ ಬೆಸ್ಸಿನ್ ಒಪ್ಪಂದ ದಂತೆ ಇಂಗ್ಲೀಷರ ಅಧಿಕಾರಿಯಾದ ಥಾಮಸ್ ಮನ್ರೊ ಸೊಂಡೂರನ್ನು ವಶಪಡಿಸಿಕೊಂಡ ನಂತರ ೯ ತಿಂಗಳು ಅಂದರೆ ೧೮೧೮ರಲ್ಲಿ ೨ನೇ ಶಿವರಾಯನಿಗೆ ಮರಳಿ ನೀಡಿದರು. ೯ ತಿಂಗಳುಗಳ ಕಾಲ ಬ್ರಿಟಿಷರ ಆಡಳಿತಾವಧಿಯಲ್ಲಿ ಶಿವರಾಯನಿಗೆ ೧೦೦೦ ಪೌಂಡ್‌ಗೆ ಸಮನಾದ ಭೂಮಿ ಮತ್ತು ಅನುಕಂಪದ ಹಣ ನೀಡಿದರು.[೫೬] ಶಿವರಾಯನು ಸೊಂಡೂರನ್ನು ಮೊದಲನೆ ಸ್ಥಿತಿಗೆ ತರಲು ಪ್ರಯತ್ನಿಸುತ್ತಾನೆ. ೨೨ವರ್ಷಗಳ ಕಾಲ ಆಳ್ವಿಕೆ ನಡೆಸಿದ ೨ನೇ ಶಿವರಾಯನು ೧೮೪೦ರಲ್ಲಿ ಮರಣ ಹೊಂದಿದನು. ಶಿವರಾಯನಿಗೆ ಮಕ್ಕಳು ಇರಲಿಲ್ಲ. ಆದ್ದರಿಂದ ಭುಜಂಗರಾಯನ ಮಗ ವೆಂಕಟರಾಯ ಅಧಿಕಾರ ವಹಿಸಿಕೊಂಡರು. ವೆಂಕಟರಾಯ ಸುಮಾರು ೨೧ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಇವನ ಕಾಲದಲ್ಲಿ ರಾಮದುರ್ಗದಲ್ಲಿ ಒಂದು ಆರೋಗ್ಯಧಾಮ ಪ್ರಾರಂಭವಾಯಿತು.

ವೆಂಕಟರಾಯ ೧೮೬೧ರಲ್ಲಿ ಮರಣ ಹೊಂದಿದಾಗ ಆತನ ಮಗ ಶಿವಷಣ್ಮುಖರಾಯ ಅಧಿಕಾರವಹಿಸಿಕೊಂಡ. ಈತನು ಇಂಗ್ಲೀಷ್ ಸರ್ಕಾರದಿಂದ ರಾಜಾ ಎಂಬ ಅಭಿದಾನ ಪಡೆದುಕೊಂಡ. ಜಾನ್ ಮ್ಯಾಕ್ ಕಾಟ್ನೀ ಎಂಬಾತ ರಾಜ ಹತ್ತಿರ ಮಾರ್ಗದರ್ಶಕನು, ಏಜಂಟನು ಆಗಿ ನೇಮಿಸಲ್ಪಟ್ಟ. ಕಾರಣವೆನೆಂದರೆ ಶಿವಷಣ್ಮುಖರಾಯ ಅಪ್ರಬುದ್ಧನಾಗಿದ್ದನು. ಹೀಗೆ ಇಂಗ್ಲೀಷ್ ಪ್ರಭುತ್ವದ ಅಂಕಿತದಲ್ಲಿಯೇ ಮುಂದಿನ ಸೊಂಡೂರಿನ ಚರಿತ್ರೆ ಸಾಗಿತ್ತು. ಶಿವಷಣ್ಮುಖರಾಯ ೧೮೭೮ರಲ್ಲಿ ಮರಣ ಹೊಂದಿದ ನಂತರ ಆತನ ತಮ್ಮ ವಿಠಲರಾವ್ ಅಧಿಕಾರ ವಹಿಸಿಕೊಂಡ. ಈತನು ೧೪ವರ್ಷಗಳ ಕಾಲ ಆಡಳಿತ ನಡೆಸಿ ೧೮೯೨ರಲ್ಲಿ ನಿಧನನಾದನು.[೫೭] ಆತನ ನಂತರ ೧೮೯೩ರಲ್ಲಿ ರಾಮಚಂದ್ರವಿಠಲ ರಾವ್‌ನ ಮಗ ವೆಂಕಟರಾವ್ ನಿಧನನಾದ. ಈತನು ಅಪ್ರಾಪ್ತ ವಯಸ್ಕನಾಗಿದ್ದರಿಂದ ಇಂಗ್ಲೀಷ್ ಎಜೆಂಟನಾಗಿ ಜೆ.ಜಿ.ಪಿರ್ತ್ ಮತ್ತು ದಿವಾನರಾಗಿ ಆತನ ಚಿಕ್ಕಪ್ಪ ಮಾಲೋಜಿರಾವ್ ಆಡಳಿತ ನಡೆಸಿದರು. ಆದರಂತೆ ಸೊಂಡೂರಿನ ಆಡಳಿತ ಗವರ್ನರ್ ಜನರಲ್ ಆಡಳಿತಕ್ಕೂ ಬೆಂಗಳೂರಿನಲ್ಲಿದ ಬ್ರಿಟಿಷ್ ರೆಸಿಡೆಂಟಿನ ಆಳ್ವಿಕೆಗೆ ಒಳಗಾಯಿತು.

ವೆಂಕಟರಾವ್ ದಕ್ಷ, ಪ್ರಾಮಾಣಿಕ ಹಾಗೂ ರಾಜನ ಗುಣಲಕ್ಷಣಗಳನ್ನು ರೂಢಿಸಿಕೊಂಡಿರಲಿಲ್ಲ. ಆದ್ದರಿಂದ ಶ್ರೀ ಯಶವಂತರಾವ್ ಹಿಂದೂರಾವ್ ಘೋರ್ಪಡೆ ಅಧಿಕಾರಕ್ಕೆ ಬಂದರು.[೫೮]

## ಯಶವಂತರಾವ್ ಹಿಂದೂರಾವ್ ಘೋರ್ಪಡೆ

ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರು ೧೯೨೮ರಿಂದ ೧೯೪೯ರವರೆಗೆ ಸೊಂಡೂರು ಸಂಸ್ಥಾನವನ್ನು ಆಳ್ವಿಕೆ ಮಾಡಿದ್ದಾರೆ. ಯಶವಂತರಾವ್ ಹಿಂದೂರಾವ್ ಘೋರ್ಪಡೆ ೧೯೦೮ ನವ್ಹೆಂಬರ್ ೧೩ರಂದು ಜನಿಸಿದರು. ಇವರು ಬೆಂಗಳೂರಿನ ಯೂರೋಪಿಯನ್ ಪಬ್ಲಿಕ್ ಸ್ಕೂಲ್‌ನಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದರು. ನಂತರ ಇಂದೂರಿನ ಹೊಲ್ಕರ್ ಕಾಲೇಜ್‌ನಲ್ಲಿ ಪದವಿ ಶಿಕ್ಷಣವನ್ನು ಮುಗಿಸಿದರು.[೫೯] ೧೯೨೮ ಜೂನ್ ೨೦ ರಂದು ಸೊಂಡೂರಿನ ಸಂಸ್ಥಾನದ ರಾಜರಾಗಿ ಅಧಿಕಾರವಹಿಸಿಕೊಂಡರು.[೬೦]

ಗ್ವಾಲಿಯರ್‌ನ ಪ್ರಮುಖರಾದ ರಾಜರಾಜೇಂದ್ರ ಶ್ರೀ.ಎಂ.ಎನ್.ಶಿತೋಲೆಯವರ ಮಗಳು ಸುಶೀಲಾ ದೇವಿಯವರನ್ನು ೧೯೨೯ರಲ್ಲಿ ಮದುವೆಯಾದರು. ಯಶವಂತರಾವ್‌ರವರು ೧೯೩೦ರಲ್ಲಿ ಸೊಂಡೂರಿನ ಸಂಪೂರ್ಣ ಅಧಿಕಾರವನ್ನು ಪಡೆದರು. ಸೊಂಡೂರು ಘೋರ್ಪಡೆ ವಂಶದವರು ರಾಜಾಕುಟುಂಬದವರಾದ ಬರೋಡ, ಜಾತ್, ದೇವಾಸ್ ಅವರೊಂದಿಗೆ ವೈವಾಹಿಕ ಸಂಬಂಧವನ್ನು ಮಾಡಿಕೊಂಡಿದ್ದರು.[೬೧]

ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರು ಅವರ ಆಳ್ವಿಕೆಯ ಕಾಲಾವಧಿಯಲ್ಲಿ ಆಡಳಿತದಲ್ಲಿ ಹಲವಾರು ಸುಧಾರಣೆಗಳನ್ನು ಮಾಡಿದರು. ಅವರ ಕಾಲದಲ್ಲಿ ಪ್ರಜಾ ಪ್ರಭುತ್ವದ ಮಾದರಿಯ ಪ್ರಜಾಮಂಡಳಿ ರಚನೆಯಾಯಿತು. ಕೆಳಮನೆ ಮತ್ತು ಮೇಲ್ಮನೆಗಳು ರಚನೆಯಾಯಿತು.[೬೨] ಕೆಳಮನೆಯನ್ನು ರಾಜಶಾಸಕಾಂಗ ಎಂದು ಕರೆಯುತ್ತಿದ್ದರು. ಇದಕ್ಕೆ ವಂಶಪಾರಂಪರ್ಯವಾಗಿ ಆಯ್ಕೆಯಾಗುತ್ತಿದ್ದರು. ಮೇಲ್ಮನೆಯಲ್ಲಿ ಚುನಾಯಿತ ಪ್ರತಿನಿಧಿಗಳು ಆಯ್ಕೆಯಾಗುತ್ತಿದ್ದರು. ಪ್ರಜಾಮಂಡಲದಲ್ಲಿ ಜನ ಪ್ರತಿನಿಧಿಗಳೇ ಪ್ರಮುಖ ಪಾತ್ರವಹಿಸುತ್ತಿದ್ದರು. ಆದರೂ ಅವುಗಳ ತೀರ್ಮಾನಗಳ ಆಧಾರದ ಮೇಲೆಯೇ ರಾಜನ ಆಡಳಿತ ನಡೆಯುತ್ತಿತ್ತು. ೧೯೩೨ರಲ್ಲಿ ರಾಜಾ ಒಂದು ಪ್ರೊಕ್ಲಾಮೆಷನ್ ಹೊರಡಿಸಿದರು.[೬೩] ಅದರ ಪ್ರಕಾರ ಹರಿಜನರಿಗೆ ಸಮಾನವಾಗಿ ಅವರಿಗೆ ದೇವಸ್ಥಾನಗಳಲ್ಲಿ ಮುಕ್ತ ಪ್ರವೇಶ ಅವಕಾಶವನ್ನು ಮಾಡಿಕೊಡಲಾಯಿತು. ಆದ್ದರಿಂದ ಈ ಪ್ರದೇಶದಲ್ಲಿ ಅಸ್ಪೃಶ್ಯತೆಯನ್ನು ಹೋಗಲಾಡಿಸಲಾಯಿತು. ಇದರಿಂದ ಆಕರ್ಷಿತರಾದ ಮಹಾತ್ಮಗಾಂಧಿಜೀಯವರು ೧೯೩೪ರಲ್ಲಿ ಸೊಂಡೂರಿಗೆ ಭೇಟಿ ನೀಡಿ ತಮ್ಮ ಹರಿಜನ ಪತ್ರಿಕೆಯಲ್ಲಿ ಕೆಳಗಿನಂತೆ ಬರೆದರು.[೬೪]

ದಕ್ಷಿಣ ಭಾರತದ ಚಿಕ್ಕ ಸಂಸ್ಥಾನವಾದ ಸೊಂಡೂರು ಸಂಸ್ಥಾನ ಹರಿಜನರಿಗೆ ಗುಡಿಗಳ ಬಾಗಿಲು ತೆರೆದಿದೆ. ಇದರಿಂದ ಸ್ವರ್ಗವೇನು ಕೆಳಗೆ ಬೀಳಲಿಲ್ಲ ಎಂದು ಬರೆದರು. ಇದರಿಂದ ಹರಿಜನೋದ್ಧಾರದ ಪ್ರತೀಕವಾಗಿ ಸೊಂಡೂರು ಸಂಸ್ಥಾನ ಯಶವಂತರಾಯರಿಂದ ಭಾರತದ ಭೂಪಟದಲ್ಲಿ ಮಿಂಚಿದರು. ಗಾಂಧೀಜಿಯವರ ಕನಸಾದ ಪಂಚಾಯತ್ ರಾಜ್ಯವನ್ನು ಸೊಂಡೂರು ಸಂಸ್ಥಾನ ಸ್ವಾತಂತ್ರ್ಯ ಪೂರ್ವದಲ್ಲೇ ಜಾರಿಗೆ ತಂದಿತ್ತು.[೬೫] ೧೯೩೨ರಲ್ಲಿ ಸೊಂಡೂರು ಸಂಸ್ಥಾನದಲ್ಲಿ ನ್ಯಾಯಾಂಗ ವ್ಯವಸ್ಥೆಯನ್ನು ಜಾರಿಗೆ ತಂದರು. ೧೯೩೨ರಲ್ಲಿ ಸೊಂಡೂರು ಚೀಫ್ ಕೋರ್ಟ್ ಆ್ಯಕ್ಟ್ ಅಡಿಯಲ್ಲಿ ಸ್ವತಂತ್ರ ನ್ಯಾಯಾಲಯ ಮತ್ತು ಮುಖ್ಯ ನ್ಯಾಯಾಲಯವನ್ನು ಸ್ಥಾಪಿಸಿದರು.[೬೬] ಈ ನ್ಯಾಯಾಂಗಕ್ಕೆಸಂಬಂಧಿಸಿದಂತೆ ಮದ್ರಾಸ್ ಸರ್ಕಾರದವರೊಂದಿಗೆ ಒಪ್ಪಂದ ಮಾಡಿಕೊಂಡಿದ್ದರು. ಇದರಿಂದ ಬಳ್ಳಾರಿ ಜಿಲ್ಲಾ ನ್ಯಾಯಾಧೀಶರನ್ನು ಸೊಂಡೂರು ಚೀಫ್ ಕೋರ್ಟಿನ ನ್ಯಾಯಾಧೀಶನಾಗಿ ನೇಮಕ ಮಾಡಿದರು.

೧೯೩೪ರಲ್ಲಿ ಕೃಷಿಗೆ ಸಾಲವನ್ನು ಒದಗಿಸಲು ಒಂದು ಪ್ರಶ್ನೆಯಾಗಿ ಕಾಡಿತು.ಅದನ್ನು ನಿವಾರಣೆ ಮಾಡುವುದಕ್ಕಾಗಿ ೧೯೩೬ರಲ್ಲಿ ಸೊಂಡೂರು ಸಾಲ ಒಪ್ಪಂದ ಆ್ಯಕ್ಟ್ ಜಾರಿಗೆ ತಂದರು. ೧೯೪೫ರ ಸೊಂಡೂರು ಜನಪ್ರಿಯ ಮಂತ್ರಿ ಮಂಡಲದ ಆ್ಯಕ್ಟ್ ಪ್ರಕಾರ ಸರದಿಯ ಆಧಾರದ ಮೇಲೆ ಮಂತ್ರಿಗಳನ್ನು ನೇಮಕ ಮಾಡುತ್ತಿದ್ದರು. ಈ ಮಂತ್ರಿಗಳು ಆಡಳಿತಾತ್ಮಕ ಹಾಗೂ ಶಾಸಕಾಂಗಕ್ಕೆ ತಾವೇ

ಜವಾಬ್ದಾರರಾಗುತ್ತಿದ್ದರು.[೬] ೧೯೪೬ರ ಸೊಂಡೂರು ಸಂವಿಧಾನದ ಪ್ರಕಾರ ಸಂಸ್ಥಾನಿಕರು ಅಥವಾ ಆಡಳಿತಗಾರರು ಯಾವುದೇ ತುರ್ತು ಪರಿಸ್ಥಿತಿಯ ಮಸೂದೆಗಳು ಹಾಗೂ ಇತರೆ ಮಸೂದೆಗಳು ಮೇಲ್ಮನೆ ಮತ್ತು ಕೆಳಮನೆಯಲ್ಲಿ ಅನುಮೊದನೆಗೊಂಡು ಆ ಜಾಹಿರು ಮತ್ತು ಘೋಷಣೆ ಯಶವಂತರಾಯರಿಂದ ಅನುಮೋದನೆಯನ್ನು ಪಡೆಯಬೇಕು ಅಥವಾ ಘೋಷಣೆಯಾಗಬೇಕಿತ್ತು.[೬] ಸಂವಿಧಾನದ ಆ್ಯಕ್ಟ್ ಪ್ರಕಾರ ಸೊಂಡೂರು ಸಂಸ್ಥಾನದಲ್ಲಿ ಯಶವಂತರಾಯರ ಕಾಲದಲ್ಲಿ ಸಮಾನತೆಯ ಹಕ್ಕು ಜಾತಿ ಲಿಂಗ ವಯಸ್ಕರ ಹಕ್ಕುಗಳು ಸಮಾನವಾಗಿ ಕಾಣುತ್ತಿದ್ದರು ಯಾವುದೇ ರೀತಿಯ ಶೋಷಣೆಗಳು ಅವರ ಕಾಲದಲ್ಲಿ ನಡೆಯುತ್ತಿರಲಿಲ್ಲ.

ರಾಜ್ಯದ ಆಧಾಯದಲ್ಲಿ ಪ್ರತಿಯೊಬ್ಬ ನಾಗರೀಕನು ೫ರೂ ನಂತೆ ಅಥವಾ ೧/೪ ರಷ್ಟು ತೆರಿಗೆಯನ್ನು ಕಟ್ಟಬೇಕಾಗಿತ್ತು. ಈ ತೆರಿಗೆಯನ್ನು ಪಂಚಾಯ್ತಿಗಳ ಅಧಿಕಾರಿಗಳು ಮತ್ತು ಮುನ್ಸಿಪಾಲಿಟಿಯ ಅಧಿಕಾರಿಗಳು ಸಂಗ್ರಹ ಮಾಡುತ್ತಿದ್ದರು.[೬]

ಈ ತೆರಿಗೆಯಿಂದ ಸಂಗ್ರಹವಾದ ಹಣವನ್ನು ರಾಜ್ಯದ ಸಂಪತ್ತಿಗಾಗಿ ಹಾಗೂ ಶಿಕ್ಷಣ ಮತ್ತು ಜನರ ರಕ್ಷಣೆಗಾಗಿ ಬಳಸುತ್ತಿದ್ದರು. ಈ ರೀತಿ ಸೊಂಡೂರು ಸಂಸ್ಥಾನ ಶ್ರೀ ಯಶವಂತರಾಯ ಹಿಂದೂರಾಯ ಘೋರ್ಪಡೆಯವರು ತಮ್ಮ ಆಳ್ವಿಕೆಯ ೨೧ ವರ್ಷಗಳ ಕಾಲ ತುಂಬಾ ಪ್ರಸಿದ್ಧಿಯನ್ನು ಪಡೆದುಕೊಂಡಿತು. ಸಂಸ್ಥಾನಗಳ ವಿಲೀನಕರಣದ ಸಂದರ್ಭದಲ್ಲಿ ಸೊಂಡೂರು ಮದ್ರಾಸಿಗೆ ಬದಲಾಗಿ ಮೈಸೂರಿಗೆ ಸೇರಬೇಕೆಂದು ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಉದ್ಘಾಟನೆ ಮಾಡುತ್ತ ರಾಜಯಶವಂತರಾಯರುಈ ಬಯಕೆಯನ್ನು ಪ್ರಕಟಿಸಿದರು. ಸ್ವಾತಂತ್ರ್ಯ ನಂತರ ಅವರ ಬಯಕೆ ಈಡೇರಿದಾಗ ಅವರು ಬಹಳ ಸಂತೋಷ ಪಟ್ಟರು.

## ಕೊನೆಟಿಪ್ಪಣಿ

೦೧. ಸ್ಕಂದ ಶ್ರೀಗಂಧ, ಸ್ಮರಣ ಸಂಚಿಕೆ, ಸೊಂಡೂರು : ಒಂದು ಪರಿಚಯ, ಮೃತ್ಯಂಜಯ ರುಮಾಲೆ, ಪುಟ-೮

೦೨. ಪ್ರಭು ಪ್ರಕಾಶನ, ನೆನಪಿನ ಸಂಚಿಕೆ, ಸೊಂಡೂರು ಕೆಲವು ಐತಹಾಸಿಕ ಘಟನೆಗಳು, ಜೆ.ಎಂ.ನಾಗಯ್ಯ, ಪುಟ-೪೧

೦೩. ಅದೇ, ಪುಟ-೪೧

೦೪. ಅದೇ, ಪುಟ-೪೨

೦೫. ಅದೇ, ಪುಟ-೪೨

೦೬. ಎ ಸ್ಟಡಿ ಆಫ್ ಹಿಸ್ಟರಿ vol-1, ಅರ್ನಾಲ್ಡ್ ಟಾಯ ಬಿ, ಪುಟ-೧

೦೭. ಸಂಸ್ಥಾನಿಕರ ಐತಿಹಾಸಿಕ ಸಾಹಿತ್ಯ, ಕೆ.ಆರ್.ಮೆಳವಂಕಿ, ಪುಟ-೧೦

೦೮. ಅದೇ, ಪುಟ-೧೦

೦೯. ಅದೇ, ಪುಟ-೧೧

೧೦. ಸಾರಂಗಶ್ರೀ ಸ್ಮರಣ ಸಂಚಿಕೆ, ಡಾ.ಎಂ.ಎಂ.ಕಲಬುರ್ಗಿ (ಸಂ)., ಪುಟ-೧೮೯-೯೦

೧೧. ಅದೇ, ಪುಟ-೧೯೦

೧೨. ಅದೇ, ಪುಟ-೧೯೦

೧೩. ಪೂರ್ವೋಕ್ತ, ಮೆಳವಂಕಿ, ಕೆ.ಆರ್, ಪುಟ-೧೩

೧೪. ಅದೇ, ಪುಟ-೧೩

೧೫. ಅದೇ, ಪುಟ-೧೩

೧೬. ಅದೇ, ಪುಟ-೧೪

೧೭. ದಿ ಕಾಂಗ್ರೆಸ್ ಪಾರ್ಟಿ ಆ್ಯಂಡ್ ಪ್ರಿನ್ಸಿ ಸ್ಟೆಟ್ಸಂ, ಎಸ್.ಎಚ್.ಪಾಟೀಲಂ, ಪುಟ-೭

೧೮. ಅದೇ, ಪುಟ-೧೪

೧೯. ಅದೇ, ಪುಟ-೧೪

೨೦. ಇತಿಹಾಸದ ಆಸಕ್ತಿಯಿಂದ ಆಚರಿಸಬಹುದಾಗಿದ್ದ ಒಂದು ಶತಮಾನೋತ್ಸವ, ಪ್ರಜಾಮತ ವಾರಪತ್ರಿಕೆ, ದಿನಾಂಕ ೧ ಜುಲೈ ೧೯೪೮, ಪುಟ-೨೨

೨೧. ಅದೇ, ಪುಟ-೧೪

೨೨. ಲೊಹಾದ್ರಿಮಡಿಲು, ಸ್ಮರಣ ಸಂಚಿಕೆ, ಸೊಂಡೂರು ಕೆಲವು ಐತಿಹಾಸಿಕ ಘಟನೆಗಳು, ಜೆ.ಎಂ.ನಾಗಯ್ಯ, ಪುಟ-೪೧-೪೨

೨೩. ಸೊಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ, ಗಿರಿಜಾ, ಪುಟ-೫೭

೨೪. ಪೂರ್ವೋಕ್ತ, ಜೆ.ಎಂ.ನಾಗಯ್ಯ, ಪುಟ-೧೦

೨೫. ಸೊಂಡೂರು ಭೂ ಹೋರಾಟ, ಅರುಣ ಜೋಳದ ಕೂಡ್ಲಿಗಿ, ಪುಟ-೧೯

೨೬. ಅದೇ, ಪುಟ-೧೯

೨೭. ಅದೇ, ಪುಟ-೧೯

೨೮. ಪೂರ್ವೋಕ್ತ, ಡಾ.ಎ.ವೃಷಬೇಂದ್ರಚಾರ್, ಪುಟ-೧೦

೨೯. ಪೂರ್ವೋಕ್ತ, ಅರುಣಜೋಳದ ಕೂಡ್ಲಿಗಿ, ಪುಟ-೨೦

೩೦. ಸಾಹಸದ ಒಂದು ಸೀಮಾ ರೇಖೆ, ಭಾರತಿ ಕಾಸರಗೋಡು (ಅನು)., ಪುಟ-೫೮

೩೧. ಅದೇ, ಪುಟ-೫೯

೩೨. ಅದೇ, ಪುಟ-೬೦

೩೩. ಅದೇ, ಪುಟ-೬೧

೩೪. ಅದೇ, ಪುಟ-೮೯

೩೫. ಅದೇ, ಪುಟ-೮೯

೩೬. ಅದೇ, ಪುಟ-೯೪

೩೭. ಅದೇ, ಪುಟ-೯೫

೩೮. ಪೂರ್ವೋಕ್ತ, ಪುಟ-೧

೩೯. ಪೂರ್ವೋಕ್ತ, ಭಾರತಿಕಾಸರಗೋಡು, ಪುಟ-೧೦೫

೪೦. ಅದೇ, ಪುಟ-೧೧೫

೪೧. ಅದೇ, ಪುಟ-೧೧೬

೪೨. ಅದೇ, ಪುಟ-೧೧೭

೪೩. ಅದೇ, ಪುಟ-೧೨೦

೪೪. ಅದೇ, ಪುಟ-೧೩೮

೪೫. ಅದೇ, ಪುಟ-೧೩೮

೪೬. ಪೂರ್ವೋಕ್ತ, ಡಾ.ಎ.ವೃಷಬೇಂದ್ರಚಾರ್, ಪುಟ-೧೦

೪೭. ಪೂರ್ವೋಕ್ತ, ಡಾ.ಎ.ವೃಷಬೇಂದ್ರಚಾರ್, ಪುಟ-೧೧

೪೮. ಅದೇ, ಪುಟ-೧೩೮

೪೯. ಪೂರ್ವೋಕ್ತ, ಭಾರತಿಕಾಸರಗೋಡು, ಪುಟ-೧೦೫

೫೦. ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಪು-೯೧

೫೧. ಅದೇ, ಪುಟ-೯೧

೫೨. ಪೂರ್ವೋಕ್ತ, ಡಾ.ಎ.ವೃಷಬೇಂದ್ರಚಾರ್, ಪುಟ-೧೧

೫೩. ಅದೇ, ಪುಟ-೧೨

೫೪. ಪೂರ್ವೋಕ್ತ, ಡಾ.ವಿರುಪಾಕ್ಷಿಪೂಜಾರಹಳ್ಳಿ, ಪುಟ-೯೨

೫೫. ಪೂರ್ವೋಕ್ತ, ಡಾ.ಎ.ವೃಷಬೇಂದ್ರಚಾರ್, ಪುಟ-೧೨

೫೬. ಪೂರ್ವೋಕ್ತ, ಡಾ.ವಿರುಪಾಕ್ಷಿಪೂಜಾರಹಳ್ಳಿ, ಪುಟ-೯೨

೫೭. ಸ್ಕಂದ ಶ್ರೀಗಂಧ ಸ್ಮರಣ ಸಂಚಿಕೆ, ಮೃತ್ಯುಂಜಯ ರುಮಾಲೆ,ಪುಟ-೬

೫೮. ಅದೇ, ಪುಟ-೬

೫೯. ಮೈಸೂರು ಸ್ಟೇಟ್ ಗೆಜೆಟಿಯರ್ ಬಳ್ಳಾರಿ ಜಿಲ್ಲಾ (೧೯೭೨), ಮೈಸೂರು ಸರ್ಕಾರ, ಪುಟ-೮೫

೬೦. ಅದೆ, ಪುಟ-೮೬

೬೧. ಅದೇ, ಪುಟ-೮೬

೬೨. ಪೂರ್ವೋಕ್ತ, ಡಾ.ಎ.ಮೃತ್ಯುಂಜಯ ರುಮಾಲೆ, ಪುಟ-೧೩

೬೩. ಅದೇ, ಪುಟ-೧೩

೬೪. ಪೂರ್ವೋಕ, ಮೈಸೂರು ಸರ್ಕಾರ, ಪುಟ-೮೬

೬೫. ಅದೇ, ಪುಟ-೮೬

೬೬. ಅದೇ, ಪುಟ-೮೬

೬೭. ಅದೇ, ಪುಟ-೮೬

೬೮. ಮೈಸೂರು ಸ್ಟೇಟ್ ಗೆಜೆಟಿಯರ್ ಬಳ್ಳಾರಿ ಜಿಲ್ಲಾ (೧೯೭೨), ಮೈಸೂರು ಸರ್ಕಾರ, ಪುಟ-೮೭

೬೯. ಅದೇ, ಪುಟ-೮೭

ಅಧ್ಯಾಯ - ನಾಲ್ಕು

# ಸೊಂಡೂರು ಸಂಸ್ಥಾನಿಕರ ರಾಜಕೀಯ ಸಂಬಂಧಗಳು : ಸಂಘಟನೆ ಮತ್ತು ಹೋರಾಟ

೪.೧. ಸೊಂಡೂರು ಸಂಸ್ಥಾನದೊಂದಿಗೆ ಇತರ ಸಂಸ್ಥಾನಗಳ ರಾಜಕೀಯ ಸಂಬಂಧಗಳು

೪.೧.೧. ಹೈದರ್ ಅಲಿ, ಟಿಪ್ಪುಸುಲ್ತಾನ್ ಜೊತೆ ಸಂಬಂಧ

೪.೧.೨. ಬ್ರಿಟಿಷರ ಜೊತೆ ರಾಜಕೀಯ ಸಂಬಂಧ

೪.೨. ಸೊಂಡೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣ ಚಳುವಳಿ

೪.೩. ಮೈಸೂರು ರಾಜ್ಯದಲ್ಲಿ ಸೊಂಡೂರು ಸಂಸ್ಥಾನದ ವಿಲೀನ

ಅಧ್ಯಾಯ - ನಾಲ್ಕು

# ಸೊಂಡೂರು ಸಂಸ್ಥಾನಿಕರ ರಾಜಕೀಯ ಸಂಬಂಧಗಳು : ಸಂಘಟನೆ ಮತ್ತು ಹೋರಾಟ

## ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನ್ ಜೊತೆ ಸಂಬಂಧ

೧೬೭೭ರಲ್ಲಿ ಬಳ್ಳಾರಿ ಸುತ್ತಮುತ್ತ ಪ್ರದೇಶವು ಬಿಜಾಪುರ ಸುಲ್ತಾನನಿಂದ ಶಿವಾಜಿಯ ಆಳ್ವಿಕೆಗೆ ಒಳಪಟ್ಟಿತು. ಈ ಪ್ರದೇಶದ ಸುತ್ತಮುತ್ತ ಇದ್ದ ಪಾಳೆಯಗಾರರ ಸಹಾಯದಿಂದ ಬಿಜಾಪುರ ಸುಲ್ತಾನನ ವಶದಲ್ಲಿದ್ದ ಈ ಪ್ರದೇಶವನ್ನು ಶಿವಾಜಿ ವಶಪಡಿಸಿಕೊಂಡು ವಿಸ್ತರಿಸಲು ತೊಡಗಿದನು. ಆಗ ಕೆಲವು ಬಾಗ ಬಿಜಾಪುರದ ಸುಲ್ತಾನನ ಅಧೀನದಲ್ಲಿ ಉಳಿದುಕೊಂಡಿತ್ತು. ನಂತರ ೧೬೮೭ರಲ್ಲಿ ಈ ಪ್ರದೇಶ ಔರಂಗಜೇಬನ ಕಾಲದಲ್ಲಿ ಮರಾಠರ ಕೈವಶವಾಯಿತು. ಆಗ ಬಳ್ಳಾರಿ, ರಾಯದುರ್ಗ ಮುಂತಾದ ಪಾಳೆಯಗಾರರನೇಕರಿಗೆ ಆಡಳಿತ ನಡೆಸಲು ಗೊಂದಲವಾಯಿತು. ಇಂತಹ ಕಠಿಣ ಪರಿಸ್ಥಿತಿಯಲ್ಲಿ ಹೈದರಾಲಿ, ಜಸಂತ್‌ಸಿಂಗ್‌ನನ್ನು ಸೋಲಿಸಿ ಬಳ್ಳಾರಿಯನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಂಡನು.[೧] ೧೭೮೬ರಲ್ಲಿ ಹೈದರಾಲಿಯ ಮಗ ಟಿಪ್ಪು ಮೈಸೂರು ರಾಜ್ಯವನ್ನು ವಿಸ್ತಾರ ಮಾಡುತ್ತ ಅದವಾನಿಯನ್ನು ವಶಪಡಿಸಿಕೊಂಡ.

ಹೈದರಾಲಿಯು ತನ್ನ ಮಹಾ ಸೈನ್ಯದೊಂದಿಗೆ ಸೊಂಡೂರಿನ ಮೇಲೆ ದಾಳಿ ಮಾಡಿದನು. ಮುರಾರಿರಾವ್ ಇದರಿಂದ ವಿಚಲಿತನಾಗಿ ಚಿಕ್ಕಪ್ಪನ ಮಕ್ಕಳಾದ ಯಶವಂತರಾವ್ ಮತ್ತು ಮಲ್ಲೋಜಿರಾವ್ ಇವರಿಗೆ ಸೈನ್ಯ ತರಲು ಹೇಳಿದ. ಈ ಇಬ್ಬರು ಸೈನ್ಯದೊಂದಿಗೆ ಬರುವ ಸಂದರ್ಭದಲ್ಲಿ ನಡು ಹಾದಿಯಲ್ಲಿ ಹೈದರನ ಸೈನ್ಯದ ದಾಳಿಗೆ ಸಿಲುಕಿದರು. ಇದರಲ್ಲಿ ಯಶವಂತರಾವ್ ಅಲ್ಲಿಯೇ ಮಡಿದನು ಮಲ್ಲೋಜಿರಾವ್‌ನನ್ನು ಸೇರಿಕೊಂಡ ನಂತರ ಹೈದರಾಲಿಯು ಸೊಂಡೂರಿನ ಮೇಲೆ ದಾಳಿ ಮಾಡಲು ಪ್ರಾರಂಭಿಸಿದನು. ಈ ದಾಳಿಯಲ್ಲಿ ಮಲ್ಲೋಜಿರಾವ್ ಯುದ್ಧ ಭೂಮಿಯಲ್ಲಿ ಹೋರಾಡುತ್ತಲೇ ಮರಣವನ್ನಪ್ಪಿದನು. ಮುರಾರಿರಾವ್ ಶರಣಾಗತನಾದ ಹೈದರ್ ಸೊಂಡೂರನ್ನು ಆಕ್ರಮಿಸಿಕೊಂಡು ಮುರಾರಿರಾವ್ ಮತ್ತು ಆತನ ದತ್ತುಪುತ್ರ ಶಿವರಾವ್‌ನನ್ನು

ಕೊಪ್ಪಳದ ಜೈಲಿನಲ್ಲಿ ಬಂಧನದಲ್ಲಿರಿಸಿದನು. ಮುರಾರಿರಾವ್ ೧೭೭೬ರಲ್ಲಿ ಮತ್ತು ಶಿವಜಿರಾವ್ ೧೭೭೯ರಲ್ಲಿ ಜೈಲಿನಲ್ಲಿಯೇ ಮರಣ ಹೊಂದಿದರು.[3]

ಇದರಿಂದ ನೊಂದ ಮರಾಠರು ಸಮಯ ಕಾಯುತ್ತಿದ್ದರು. ದತ್ತು ವಾಡದ ಯಶವಂತರಾವ್ ಮಕ್ಕಳಾದ ೨ನೇ ಶಿವರಾವ್ ಮತ್ತು ವೆಂಕಟರಾವ್ ಟಿಪ್ಪು ಸುಲ್ತಾನರಿಂದ ಸೊಂಡೂರನ್ನು ಹಿಂದಕ್ಕೆ ಪಡೆಯಲು ಹೋರಾಡಿದರು.

೧೭೮೪ರಲ್ಲಿ ೨ನೇ ಶಿವರಾವ್ ಯುದ್ಧದಲ್ಲಿ ಮರಣ ಹೊಂದಿದ. ವೆಂಕಟರಾವ್ ಟಿಪ್ಪುವಿನ ಸೈನ್ಯದಿಂದ ೧೭೯೦ರಲ್ಲಿ ಹೊರದೂಡಲ್ಪಟ್ಟ. ಆಗ ಅಣ್ಣನ ಮಗ ಸಿದ್ಧೋಜಿಯನ್ನು ವೆಂಕಟರಾವ್ ರಕ್ಷಿಸಿಕೊಂಡು ಬಂದನು. ವೆಂಕಟರಾವ್ ಪುತ್ರ ಸಂತಾನವಿಲ್ಲದೆ ಮರಣ ಹೊಂದಿದ. ಆಗ ತನ್ನ ಹೆಂಡತಿ ಖಂಡೇರಾಯನ ಹಿರಿಯ ಮಗ ಶಿವರಾವ್‌ನನ್ನು ದತ್ತುತೆಗೆದುಕೊಂಡಳು. ಈತನು ೧೭೯೯ರಲ್ಲಿ ಸೊಂಡೂರನ್ನು ಟಿಪ್ಪುಸುಲ್ತಾನನಿಂದ ಗೆದ್ದುಕೊಂಡನು. ಈ ಸಮಯದಲ್ಲಿ ಟಿಪ್ಪು ಇಂಗ್ಲಿಷರ ಜೊತೆ ಯುದ್ಧ ಮಾಡುತ್ತ ಮರಣ ಹೊಂದಿದ. ಟಿಪ್ಪುವಿನ ಸಾವು ಶಿವರಾವ್‌ನಿಗೆ ಸೊಂಡೂರನ್ನು ಭದ್ರ ಪಡಿಸಿಕೊಳ್ಳಲು ನೆರವಾಯಿತು.[4]

ಇಂಪಿರಿಯಲ್ ಗೆಜೆಟಿಯರ್ ಪ್ರಕಾರ ಹೈದರಾಲಿ ಸೊಂಡೂರನ್ನು ಪಡೆದ ನಂತರ ೧೭೭೯ರಲ್ಲಿ ಗುತ್ತಿಯನ್ನು ಆಕ್ರಮಿಸಿಕೊಂಡನು. ಹೈದರಾಲಿ ಅನುಸರಿಸಿದ ನೀತಿಯನ್ನು ತನ್ನ ಮಗನಾದ ಟಿಪ್ಪುಸುಲ್ತಾನ್ ಮುಂದುವರಿಸಿದನು. ೧೭೮೪ರಲ್ಲಿ ಟಿಪ್ಪು ಸೊಂಡೂರಿನ ಮೇಲೆ ದಾಳಿ ಮಾಡಿ ಶಿವರಾವ್‌ನನ್ನು ಕೊಲೆ ಮಾಡಿದನು.[5] ನಂತರ ಶಿವರಾವನ ಸಹೋದರ ವೆಂಕಟರಾವ್ ಟಿಪ್ಪುವಿನ ವಿರುದ್ಧ ಹೋರಾಡಿ ಸೊಂಡೂರನ್ನು ಮತ್ತೆ ವಶಪಡಿಸಿಕೊಂಡನು. ಮುಂದೆ ಬ್ರಿಟೀಷರಿಗೆ ಮತ್ತು ಟಿಪ್ಪುವಿಗೆ ೧೭೯೨ರಲ್ಲಿ ಏರ್ಪಟ್ಟ ಒಪ್ಪಂದದಂತೆ ಘೋರ್ಪಡೆ ವಂಶದವರಿಗೆ ಸೊಂಡೂರಿನ ಅಧಿಕಾರವನ್ನು ನೀಡಲಾಯಿತು. ನಂತರ ಶ್ರೀರಂಗ ಪಟ್ಟಣದ ಅವನತಿಯವರೆಗೂ ಟಿಪ್ಪು ಸೊಂಡೂರನ್ನು ಮುತ್ತಿಗೆ ಹಾಕಲಿಲ್ಲ ಎಂಬ ಉಲ್ಲೇಖವಿದೆ.[6]

ಹೈದರನು ಕ್ರಿ.ಶ. ೧೭೬೭-೬೯ರಲ್ಲಿ ನಡೆದ ಮೊದಲ ಆಂಗ್ಲೋ ಮೈಸೂರು ಯುದ್ಧ ನಂತರ ಕ್ರಿ.ಶ. ೧೭೬೯ರಲ್ಲಿ ಹೈದರನು ಬ್ರಿಟೀಷ್ ಪ್ರದೇಶಗಳನ್ನು ಗೆದ್ದುಕೊಳ್ಳುತ್ತ ಮದ್ರಾಸಿನವರೆಗೆ ರಾಜ್ಯವನ್ನು ವಿಸ್ತರಿಸಿದನು.

ಕ್ರಿ.ಶ.೧೭೭೧ರಲ್ಲಿ ಮರಾಠರು ಹೈದರಾಲಿಯ ಮೇಲೆ ಯುದ್ಧ ಮಾಡಿದರು. ಆಗ ಹೈದರಾಲಿಯು ಕಪ್ಪ ಕಾಣಿಕೆ ಕೊಡುವ ಮೂಲಕ ರಾಜಿಮಾಡಿಕೊಂಡಿದ್ದನ್ನು, ಅದರಂತೆ ತುಂಗಭದ್ರೆಯ ಎತ್ತರಕ್ಕೆ ತಾನು ಗೆದ್ದಿದ್ದ ಪ್ರದೇಶಗಳನ್ನು ಬಿಟ್ಟುಕೊಡಲು ಒಪ್ಪಿದನು. ಆದರೆ ಮಾದವರಾವ್ ಪೇಶ್ವೆ ಮರಣ ಹೊಂದಿದ ನಂತರ ಮರಾಠರಲ್ಲಿ ಅರಾಜಕತೆಯುಂಟಾಯಿತು. ಈ ಸಮಯದಲ್ಲಿ ಹೈದರನು ಸವಣೂರು, ಕಡಪ,ಕರ್ನೂಲ ಮತ್ತು ಸೊಂಡೂರನ್ನು ಗೆದ್ದುಕೊಂಡನು. ಮುಂದೆ ಕ್ರಿ.ಶ. ೧೭೮೦ರವರೆಗೆ ಇಂಗ್ಲೀಷರು ತಟಸ್ಥರಾಗಿದ್ದರು. ರಾಜ್ಯದಲ್ಲಿ ಶಾಂತಿ ನೆಲೆಸಿತ್ತು. ಅಂದರೆ ಕ್ರಿ.ಶ. ೧೭೭೬ರಲ್ಲಿ ಕೃಷ್ಣಾನಗರದ ಕೋಟೆ ನಿರ್ಮಾಣ ಕಾರ್ಯ ಆರಂಭಿಸಿದ.

## ಬ್ರಿಟಿಷರ ಜೊತೆ ರಾಜಕೀಯ ಸಂಬಂಧ

ಬಳ್ಳಾರಿ ಜಿಲ್ಲೆಯಲ್ಲಿ ಬ್ರಿಟೀಷರ ಆಳ್ವಿಕೆ ೧೮೦೦ರಿಂದ ಪ್ರಾರಂಭವಾಗಿ, ಪ್ರಥಮ ಕಲೆಕ್ಟರಾಗಿ ಥಾಮಸ್ ಮನ್ರೋ ನೇಮಕವಾದರು. ಈ ಸಮಯದಲ್ಲಿ ಸೊಂಡೂರು ಬ್ರಿಟಿಷರ ಅಧೀನದಲ್ಲಿ ಒಂದು ಪ್ರತ್ಯೇಕ ಸಂಸ್ಥಾನವಾಗಿತ್ತು. ಆ ಪ್ರದೇಶದಲ್ಲಿ ಕಲೆಕ್ಟರ್‌ನಿಂದ ಅನುಮೋದಿತ ಏಜೆಂಟ್ ಇದ್ದು ಸಂಸ್ಥಾನದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು.[೬]

೧೭೯೦ರಲ್ಲಿ ಭಾರತದ ಗವರ್ನರ್‌ಜನರಲ್ ಲಾರ್ಡ್‌ಕಾರ್ನ್‌ವಾಲೀಸ್‌ರ ಅಧೀನದಲ್ಲಿ ಕಲೆಕ್ಟರ್, ಸಹಾಯಕ ಕಲೆಕ್ಟರ್, ಡೆಪ್ಯೂಟಿ ಕಲೆಕ್ಟರ್, ಟ್ರೆಸರಿ ಕಲೆಕ್ಟರ್‌ಗಳು ನೋಡಿಕೊಳ್ಳುತ್ತಿದ್ದರು. ೧೮೧೭ರಲ್ಲಿ ಬಳ್ಳಾರಿ ಜಿಲ್ಲಾ ಕಲೆಕ್ಟರ್ ಸರ್ ಥಾಮಸ್ ಮನ್ರೊ ನೇತೃತ್ವದಲ್ಲಿ ಪೇಶ್ವೆಯವರಿಗೂ ಇಂಗ್ಲೀಷರಿಗೂ ಆದ ಬೆಸ್ಸಿನ್ ಒಪ್ಪಂದದಂತೆ ಸೊಂಡೂರನ್ನು ಇಂಗ್ಲೀಷರಿಗೆ ಬಿಟ್ಟುಕೊಡಲಾಯಿತು.[೭] ಆಗ ಶಿವರಾವ್‌ಗೆ ೧೦೦೦ ಪೌಂಡ್‌ಗೆ ಸಮವಾದ ಭೂಮಿ ಮತ್ತು ಅನುಕಂಪದ ಹಣ ನೀಡಿದರು. ಪೇಶ್ವೆ ಮನೆತನದ ತರುವಾಯ ೧೮೧೮ರಲ್ಲಿ ಸೊಂಡೂರನ್ನು ಘೋರ್ಪಡೆ ಮನೆತನಕ್ಕೆ ಮರಳಿ ವಹಿಸುವಂತೆ ಸರ್ಕಾರ ಅನುಮತಿ ನೀಡಿತು.[೮]

೧೮೨೬ರಲ್ಲಿ ಬ್ರಿಟಿಷ್ ಸರ್ಕಾರ ಒಂದು ಕಾಯಿದೆಯನ್ನು ಜಾರಿಗೆ ತಂದಿತು. ಅದರ ಪ್ರಕಾರ ಬ್ರಿಟಿಷರಿಗೆ ಪ್ರತಿ ತಿಂಗಳು ಒಪ್ಪಂದದಂತೆ ಪೊಗದಿ ಸಲ್ಲಿಸಬೇಕಾಗಿತ್ತು. ಶಿವರಾವ್ ನಿಧನ ನಂತರ ಇವನ ದೊಡ್ಡಮಗ ಶಿವಷಣ್ಮುಖರಾವ್ ಈ ಸನದನ್ನು ೧೮೬೩ರಲ್ಲಿ ಪಡೆದ. ಈತನು ಬಳ್ಳಾರಿಯ ಲಂಡನ್ ಮಿಷನ್‌ಗೆ ಸಂಬಂಧಿಸಿದ ಜೆ.ಮೆಕಾರ್ಥೆಯನ್ನು ತನ್ನ ಆಡಳಿತದ ಸಲಹೆಗಾರರನ್ನಾಗಿ ನೇಮಕ ಮಾಡಿಕೊಂಡಿದ್ದನು.[೯]

ಶಿವಷಣ್ಮುಖರಾವ್‌ನಿಗೆ ಜನವರಿ ೨೪.೧೮೭೬ರಂದು ಗವರ್ನರ್ ಜನರಲ್ ಆದ ಲಾರ್ಡ್‌ನಾರ್ಥ ಬ್ರೂಕನು ರಾಜ ಎಂಬ ಬಿರುದನ್ನು ನೀಡಿದನು.[೧೦]

ನಂತರ ರಾಮಚಂದ್ರ ವಿಠಲರಾವ್ ೫ ಫೆಬ್ರವರಿ ೧೮೭೯ರಲ್ಲಿ ಬ್ರಿಟೀಷ್ ಕಂಪನಿ ಸರಕಾರವು ಸನ್ನದುಕೊಟ್ಟು ಸೊಂಡೂರಿನ ರಾಜನನ್ನಾಗಿ ಮಾಡಿದರು ರಾಜನ ಎಲ್ಲಾ ಕಂದಾಯ ಜವಾಬ್ದಾರಿ ಪೋಲಿಸ್ ರಾಜ್ಯ ನಾಗರೀಕ ಸೇವೆ, ನ್ಯಾಯ ತೀರ್ಮಾನ, ಕ್ರಿಮಿನಲ್ ನ್ಯಾಯಾಂಗ ಮುಂತಾದುದ್ದನ್ನು ಮದ್ರಾಸ್ ಸರ್ಕಾರ ನೋಡಿಕೊಳ್ಳುತ್ತಿತ್ತು. ಮುಖ್ಯ ಹೊಣೆ ಸನ್ನದ್ದು ನೀಡುವ ಹಕ್ಕು ದತ್ತು ಸ್ವೀಕಾರ ಮುಂತಾದವನ್ನು ಬ್ರಿಟಿಷ್ ಸರ್ಕಾರ ಕೊಡುತ್ತಿತ್ತು.[೧೧] ವಿಠಲರಾವ್ ಡಿಸೆಂಬರ್ ೨ ೧೮೯೨ರಲ್ಲಿ ನಿಧನರಾದರು. ಇವನ ಮಗನಾದ ವೆಂಕಟರಾವ್‌ನಿಗೆ ಬ್ರಿಟಿಷ್ ಸರಕಾರವು ರಾಜಸನ್ನದು ನೀಡಿ ೧೮೯೩ರಲ್ಲಿ ರಾಜನೆಂದು ಘೋಷಿಸಿತು. ಇಂಗ್ಲೀಷ್ ಎಜೆಂಟ್‌ನಾಗಿ ಜೆ.ಜಿ.ಪಿರ್ತಾ ಆತನ ಚಿಕ್ಕಪ್ಪ ಮಾಲೋಜಿರಾವ್ ದಿವಾನನಾಗಿ ಆಡಳಿತ ನಡೆಸಿದರು. ಕಾರಣ ಇವನು ಅಪ್ರಾಪ್ತವಯಸ್ಕನಾಗಿದ್ದನು. ೧೯೨೩ರಲ್ಲಿ ಆಂಗ್ಲ ಸರಕಾರ ನೇರವಿರುವ ರಾಜಕೀಯ ಸಂಬಂಧ ಆಡಳಿತವನ್ನು ಸ್ಥಾಪಿಸಿತು. ಆಗ ಸೊಂಡೂರು ಸ್ವಯತ್ತ ಆಡಳಿತ ಹೊಂದಿದ ಪ್ರಮುಖ ಸಂಸ್ಥಾನಗಳಲ್ಲೊಂದಾಯಿತು. ೧೯೨೩ರಲ್ಲಿ ಮಾಂಟ್ ಫರ್ಡ್ ಸುಧಾರಣೆಯಿಂದ ಸಂಸ್ಥಾನಗಳ ಆಡಳಿತ

ಬ್ರಿಟಿಷ್ ಸರಕಾರಕ್ಕೆ ನೇರವಾಗಿ ಸೇರಿತ್ತು ಅದರಂತೆ ಸೊಂಡೂರಿನ ಆಡಳಿತ ತ್ರಿವೆಂಡ್ರಂನಲ್ಲಿದ್ದ ಗವರ್ನ್‌ರ್ ಜನರಲ್ ಆಡಳಿತ ನಂತರ ೧೯೩೯ರಲ್ಲಿ ಬೆಂಗಳೂರಿನಲ್ಲಿದ್ದ ಬ್ರಿಟಿಷ್ ರೆಸಿಡೆಂಟಿನ ಆಳ್ವಿಕೆಗೂ ಒಳಗಾಯಿತು.[೨]

ವೆಂಕಟರಾವ್‌ನ ನಿಧನ ನಂತರ ಗಜೇಂದ್ರಗಡ ಸಂಸ್ಥಾನದ ವಂಶಸ್ಥರಾದ ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರನ್ನು ೧೯೨೮ರಲ್ಲಿ ಸನದು ಕೊಟ್ಟು ರಾಜನನ್ನಾಗಿಸಿದರು.

ಇವರ ಕಾಲದ ಆರಂಭ ಹಂತದಲ್ಲಿ ಶಾಸನ ಬದ್ಧ ಆಡಳಿತ ಇರಲಿಲ್ಲ. ಮುಂದೆ ಇವರು ಕೆಲವು ವಿಶಿಷ್ಟ ಆಡಳಿತ ಸೂತ್ರವನ್ನು ಜಾರಿಗೆ ತಂದರು, ನಂತರ ೧೯೩೧ರಲ್ಲಿ ಪ್ರಥಮ ಬಾರಿಗೆ ಶಾಸನ ಸಭೆಯಾದ ಪ್ರಜಾ ಮಂಡಳಿಯು ಜಾರಿಗೆ ಬಂದಿತು.

ಒಟ್ಟಾರೆ ಸೊಂಡೂರು ಸಂಸ್ಥಾನದಲ್ಲಿ ಬ್ರಿಟಿಷರ ಅಧಿಕಾರಿಗಳು ಸೊಂಡೂರು ಅಭಿವೃದ್ಧಿಯ ನೆಪದಲ್ಲಿ ತಮ್ಮ ತಂತ್ರಗಳನ್ನು ಉಪಯೋಗಿಸಿಕೊಂಡು ಸೊಂಡೂರಿನ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡರು. ಇವರು ಬ್ರಿಟಿಷ್ ಏಜೆಂಟನನ್ನು ಸೊಂಡೂರು ಸಂಸ್ಥಾನದಲ್ಲಿ ನೇಮಕ ಮಾಡಿಕೊಂಡು ಬ್ರಿಟಿಷ್ ಸೈನಿಕರ ವೆಚ್ಚವನ್ನು ಸಂಸ್ಥಾನವೇ ಭರಿಸಬೇಕಾಗಿತ್ತು. ಸೊಂಡೂರಿನ ಸಂಸ್ಥಾನಿಕರ ಬಗ್ಗೆ ಬ್ರಿಟಿಷರು ಉದಾರತೆಯನ್ನು ತೋರಿಸುತ್ತಾ ಬಂದರೂ ಕೊನೆಗೆ ಬುಡಮೇಲಾಯಿತು.

೧೯೪೭ರಲ್ಲಿ ಇಡಿ ಭಾರತ ಸ್ವತಂತ್ರವಾದಾಗ ಬ್ರಿಟಿಷ್ ಸರ್ಕಾರ ಸಾರ್ವಭೌಮತ್ವವನ್ನು ಸ್ಥಳೀಯ ರಾಜರಿಗೆ ಹಿಂದಿರುಗಿಸಿದರು. ಬಳ್ಳಾರಿ ಜಿಲ್ಲಾ ಕಲೆಕ್ಟರ್ ಇ.ಸಿ.ಅಲ್ಲಾರ್ಡಿಸರ್ ಬಲದಿಂದ ಸೊಂಡೂರಿನ ಸರಕಾರವನ್ನು ೧೯೪೮ರಲ್ಲಿ ವಶಪಡಿಸಿಕೊಳ್ಳಲು ಪ್ರಯತ್ನಿಸಿದರು. ಆದರೆ ಬ್ರಿಟಿಷರ ಅಧೀನದಲ್ಲಿ ಮದ್ರಾಸ್ ಸರ್ಕಾರದ ಆಜ್ಞೆಯಂತೆ ನಡೆಯಬೇಕಿತ್ತು.[೧೩] ಇದು ೧೯೪೯ ಏಪ್ರಿಲ್‌ರಂದು ಮೈಸೂರು ರಾಜ್ಯದಲ್ಲಿ ಸೇರಿತು.

### ಸೊಂಡೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣ ಚಳವಳಿ

ಭಾರತದ ಸ್ವಾತಂತ್ರದ ಹೋರಾಟದಲ್ಲಿ ಸೊಂಡೂರಿನ ಸಂಸ್ಥಾನದ ಕೊಡುಗೆ ಕೂಡ ಅಪಾರವಾಗಿದೆ ಎಂದು ಹೇಳಬಹುದು. ಈ ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಮುಖ್ಯವಾದ ಪ್ರೇರಣೆ ಎಂದರೆ ಸೊಂಡೂರು ಸಂಸ್ಥಾನಿಕರ ಆಳ್ವಿಕೆ ಮತ್ತು ಮಹಾತ್ಮ ಗಾಂಧೀಜಿಯವರು ಸೊಂಡೂರಿಗೆ ಭೇಟಿ ನೀಡಿದುದು.

ಮಹಾತ್ಮ ಗಾಂಧೀಜಿಯವರು ರಾಷ್ಟ್ರಪ್ರೇಮ ಮತ್ತು ಸ್ವಾತಂತ್ರ್ಯದ ಬಗ್ಗೆ ಸ್ಫೂರ್ತಿಯನ್ನು ನೀಡಲು ದೇಶದ ನಾನಾ ಭಾಗಗಳಲ್ಲಿ ಸಂಚರಿಸುತ್ತಿದ್ದರು. ಅದರಂತೆ ೧೯೩೨ರಲ್ಲಿ ಗಾಂಧೀಜಿಯವರು ಬಳ್ಳಾರಿಗೆ ಬಂದಿದ್ದರು. ಆ ಸಮಯ ಭೇಟಿ ನೀಡಲು ಪ್ರಮುಖ ಕಾರಣವೇನೆಂದರೆ ಬಳ್ಳಾರಿಯ ರಾಜಕೀಯ ಗಣ್ಯರು ಬ್ರಿಟೀಷ್ ಸಾಮ್ರಾಜ್ಯದ ವಿರುದ್ಧ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದರಿಂದ ಬ್ರಿಟೀಷರ ಲಾಠಿ ಪ್ರಹಾರ ಮಾಡಿ ಅಲ್ಲಿ ಮಾಡುತ್ತಿದ್ದ ಚಳುವಳಿಗಾರರಿಗೆ ಬಂಧನದಲ್ಲಿ ಇಟ್ಟಿದ್ದರು. ಇದರಿಂದ ಉಂಟಾಗಿದ್ದ ಉದ್ರಿಕ್ತ ವಾತಾರವಣವನ್ನು ಶಾಂತಗೊಳಿಸಲು ಗಾಂಧಿಯವರು ಬಂದಿದ್ದರು.[೧೪] ಪುನಃ ೧೯೩೪ರಲ್ಲಿ ದಾವಣಗೆರೆ, ಹರಪ್ಪನಹಳ್ಳಿ, ಕೊಟ್ಟೂರು, ಕೂಡ್ಲಿಗಿ ಮೂಲಕ ಸೊಂಡೂರನ್ನು ಪ್ರವೇಶಿಸಿದರು. ನಿಸರ್ಗಾಭರಣಗಳಿಂದ ಅಲಂಕಾರಗೊಂಡಿದ್ದ ಸೊಂಡೂರು ಅವರ ಮನ ತಣಿಸಿತು. ಇಲ್ಲಿದ್ದ ಪರಿಶುದ್ಧ ಮತ್ತು ಪ್ರಶಾಂತ ವಾತಾವರಣ

ಅವರ ಮನಸ್ಸಿನ ಮೇಲೆ ಅಪಾರ ಪರಿಣಾಮ ಬೀರಿತ್ತು. ಇದನ್ನು ಕಂಡು ಅವರು SEE SONDUR IN SEPTE MBER ಎಂದು ಸೆಪ್ಟೆಂಬರ್‌ನಲ್ಲಿ ಕಂಡ ಸೊಂಡೂರನ್ನು ಹೊಗಳಿದರು. ಇಲ್ಲಿಯೇ ಇದ್ದು ಗಾಂಧೀಜಿಯವರು ಸಮಾನತೆಯ ಬಗ್ಗೆ ಭಾಷಣ ನೀಡಿದ್ದರು.[೧೫]

ಭಾರತ ೧೫.೮.೧೯೪೭ರಲ್ಲಿ ಸ್ವಾತಂತ್ರ್ಯಗಳಿಸಿದರೂ. ಸಹ ಸೊಂಡೂರು ಸಂಸ್ಥಾನಕ್ಕೆ ಮಾತ್ರ ಸ್ವಾತಂತ್ರ್ಯ ಸಿಗಲಿಲ್ಲ. ಆ ಸಂದರ್ಭದಲ್ಲಿ ಈ ಸಂಸ್ಥಾನವು ೩೩ ಹಳ್ಳಿಗಳಿಂದ ಹಾಗೂ ಕೇವಲ ೧೫ ಸಾವಿರ ಜನಸಂಖ್ಯೆಯನ್ನು ಒಳಗೊಂಡಿತ್ತು. ಸಂಸ್ಥಾನವನ್ನು ಪ್ರವೇಶಿಸಲು ಅಂದು ಕೇವಲ ಎರಡು ಮಾರ್ಗಗಳಿದ್ದವು. ಅವು ಎಂದರೆ ಗಂಡಿ ನಂರಸಿಂಹ ಸ್ವಾಮಿ ಮಾರ್ಗ ಮತ್ತು ಬಳ್ಳಾರಿ ಮಾರ್ಗ.[೧೬]

ಸ್ವಾತಂತ್ರ್ಯ ಹೋರಾಟಗಾರರಾದ ಟಿ.ಬಿ.ಕೇಶವರಾಯರ ಹೇಳಿಕೆಯಂತೆ ಸ್ವಾತಂತ್ರ್ಯ ಚಳುವಳಿಯ ಅವಧಿಯಲ್ಲಿ ಸೊಂಡೂರು ಸಂಸ್ಥಾನದಿಂದ ಹೊರಕ್ಕೆ ಅಥವಾ ಹೊರಗಡೆಯಿಂದ ಸಂಸ್ಥಾನದೊಳಗೆ ಯಾರು ಪ್ರವೇಶಿಸದಂತೆ ನಿರ್ಬಂಧ ವಿಧಿಸಲಾಗಿತ್ತು. ಮಹಾರಾಜ ಸರಕಾರದ ನೀತಿಗಳನ್ನು ಹಾಗೂ ಆಳ್ವಿಕೆಯ ಸುದ್ಧಿಯೂ ಹೊರಗೆ ಹೋಗುವಂತಿರಲಿಲ್ಲ. ಬ್ರಿಟೀಷ್ ಕರ್ನಾಟಕದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿಯಲ್ಲಿ ಈ ಸಂಸ್ಥಾನದ ಪ್ರಜೆಗಳು ಭಾಗವಹಿಸುವಂತಿರಲಿಲ್ಲ.[೧೭]

ಭಾರತದಲ್ಲಿ ಸಂಸ್ಥಾನಿಕರ ವಿರುದ್ಧ ಹೋರಾಟ ನಡೆಸುತ್ತಿದ್ದವರಲ್ಲಿ ಸೊಂಡೂರು ಸಂಸ್ಥಾನಿಕರು ಕೂಡ ಭಾಗವಹಿಸಿದ್ದರು. ಸೊಂಡೂರು ಸಂಸ್ಥಾನಿಕರ ವಿರುದ್ಧ ಯತ್ನಟ್ಟಿ ಮತ್ತು ಹೊಸಳ್ಳಿ ಗ್ರಾಮಗಳ ಜನರು ಪ್ರತಿಭಟಿಸಿದರು. ಇಡೀ ಸಂಸ್ಥಾನದಲ್ಲಿ ಈ ಎರಡು ಗ್ರಾಮಗಳ ಜನರು ಮಹಾರಾಜರಿಗೆ ತಲೆನೋವಾಗಿದ್ದವು. ೧೯೩೭ರಲ್ಲಿ ಕುಮಾರಸ್ವಾಮಿ ದೇವಸ್ಥಾನದ ೧೩ ಗ್ರಾಮಗಳಿಗೆ ಸೇರಿದ್ದ ಜಮೀನನ್ನು ಮಹರಾಜರು ತಮ್ಮದೆಂದು ಘೋಷಿಸಿಕೊಂಡಾಗ ಎಂ.ಶರಭಯ್ಯನವರು ಎಲ್ಲಾ ರೈತರನ್ನು ಮತ್ತು ಜನರನ್ನು ಸಂಘಟಿಸಿ ಪ್ರತಿಭಟನೆ ಮಾಡಿದ್ದಕ್ಕೆ ಅವರು ಜೈಲು ಶಿಕ್ಷೆ ಅನುಭವಿಸಬೇಕಾಯಿತು.[೧೮]

ಸೊಂಡೂರು ಮಹಾರಾಜರ ವಿರುದ್ಧ ಹೋರಾಟ ನಡೆಸುತ್ತಿದ್ದ ಮನೆತನಗಳೆಂದರೆ ಷರಾಪ್ ಮನೆತನ ಮತ್ತು ಬೋಜ ಮನೆತನ ಹಾಗೂ ಪೊತನೀಸ್ ಮನೆತನಗಳು. ಈ ಮನೆತನದ ಹಿರಿಯರೆಲ್ಲರೂ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಕೊಟ್ಟೂರು, ಕೂಡ್ಲಿಗಿಗಳಲ್ಲಿ ನಡೆಯುತ್ತಿದ್ದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಯಜಮಾನ ಶಾಂತರುದ್ರಪ್ಪನವರು ಬಳ್ಳಾರಿಯಿಂದಲೇ ಹೋರಾಟ ನಡೆಸಿದರು. ಕ್ರಾಂತಿಕಾರಿ ಕರಪತ್ರಗಳನ್ನು ಸಂಸ್ಥಾನದೊಳಗೆ ಹಂಚಿಸಿದರು.[೧೯]

ಭಾರತದ ಗಣರಾಜ್ಯದಲ್ಲಿ ಸೊಂಡೂರು ಸಂಸ್ಥಾನವನ್ನು ವಿಲೀನಗೊಳಿಸಲಿಕ್ಕಾಗಿ ನಡೆದ ಹೋರಾಟದಲ್ಲಿ ಭಾಗವಹಿಸಿದ ತಾಲ್ಲೂಕಿನ ಹೋರಾಟಗಾರರಲ್ಲಿ ಪ್ರಮುಖರಾದ ಯತ್ನಟ್ಟಿ, ತಾರಾನಗರದ ಯಜಮಾನ ಶಾಂತರುದ್ರಪ್ಪ, ಅಂಗಡಿ, ಶರಭಯ್ಯ, ಉಳ್ಳಗಡ್ಡಿ ಕರಿಯಪ್ಪ, ಬಾವಿಕಟ್ಟಿ ಕರಿಬಸಪ್ಪ, ಕೃಷ್ಣ ನಗರದ ಎಲಿಗಾರ ತಿಮ್ಮಪ್ಪ, ಭುಜಂಗ ನಗರದ ಗುರುಶಾಂತಯ್ಯ, ಅರಳುಕಲ್ ಕುಮಾರಪ್ಪ, ನಾಗಲಾಪುರದ ಸಿದ್ಧರಾಮಯ್ಯ, ಎಸ್. ವೈ.ಸೋಮನಗೌಡರು, ನಾಗನಗೌಡ, ಪೊತನಿಸ್ ರಾಮರಾಯ, ಮಹಾಲಿಂಗಪ್ಪ,

ಕಾಲೆಸುಬ್ಬಣ್ಣ ಭೋಜ ಅಡಿವಪ್ಪ ಗಿರಿಮಲ್ಲಪ್ಪ, ಇವರೆಲ್ಲರು ಸೊಂಡೂರು ಮಹಾರಾಜರಿಗೆ ಸೇರಿದ್ದ ಸೊಂಡೂರು ಸ್ಟೇಟ್ ಸೆಲ್‌ನಲ್ಲಿ ಶಿಕ್ಷೆ ಅನುಭವಿಸಿದರು.[೨೦] ಇವರೆಲ್ಲರ ಪರಿಶ್ರಮದಿಂದ ಸೊಂಡೂರು ಸಂಸ್ಥಾನದಲ್ಲಿ ಪ್ರಜಾಪರಿಷತ್ತು ಜಾರಿಗೆ ಬಂದಿತ್ತು. ಅದರ ಅಧಿವೇಶನ ಯತ್ನಟ್ಟಿಯಲ್ಲಿ ಜರುಗಿತು. ಕರ್ನಾಟಕ ರಾಜ್ಯದ ಧುರೀಣರಾದ ಕೊಲ್ಲಾಪುರದ ರತ್ನಪ್ಪ ಕುಂಬಾರ, ತಲ್ಲೂರು ರಾಯನಗೌಡ ಶಾಂತಿನಾಥ ಇಂಗಳೆ, ಮಹದೇವಪ್ಪ ಪಟ್ಟಣ, ಬಳ್ಳಾರಿಯ ಯಜಮಾನ್ ಶಾಂತರುದ್ರಪ್ಪನವರು, ಈ ಅಧಿವೇಶನದಲ್ಲಿ ಭಾಗವಹಿಸಿದ್ದರು. ಸೊಂಡೂರು ಸಂಸ್ಥಾನವು ಭಾರತದ ಗಣರಾಜ್ಯದಲ್ಲಿ ವಿಲೀನವಾಗಬೇಕೆಂದು ಯತ್ನಟ್ಟಿಯಲ್ಲಿ ನಡೆದ ಪ್ರಜಾಪರಿಷತ್ತು ನಿರ್ಣಯ ಮಾಡಿತು.[೨೧]



ಅಂದಿನ ಕೇಂದ್ರ ಸರ್ಕಾರದ ಗೃಹಮಂತ್ರಿ ಸರದಾರ ವಲ್ಲಭಬಾಯಿ ಪಟೇಲರು ಭಾರತದ ೫೬೨ ಸಂಸ್ಥಾನಿಕರಿಗೂ ನೋಟಿಸು ಕೊಟ್ಟರು.[೨೨] ಕೇಂದ್ರ ಸರಕಾರದಲ್ಲಿ ವಿಲೀನವಾಗಬೇಕು ಇಲ್ಲವಾದಲ್ಲಿ ಸರಕಾರಿ ಪೋಲಿಸ್ ಪಡೆಯಿಂದ ವಶಪಡಿಸಿಕೊಳ್ಳಲಾಗುತ್ತದೆ ಎಂದು ತಿಳಿಸಿದರು.[೨೩] ಈ ಎಲ್ಲಾ ಬೆಳವಣಿಗೆಯಿಂದ ಪ್ರಜಾಪರಿಷತ್ತಿನ ಅಧಿವೇಶನದಲ್ಲಿ ಸೊಂಡೂರು ಸಂಸ್ಥಾನ ವಿಲೀನವಾಗಬೇಕೆಂದು ನಿರ್ಣಯ ತೆಗೆದುಕೊಂಡರು. ಅದರಂತೆಯೇ ಆ ಪ್ರದೇಶದ ಸ್ವಾತಂತ್ರ್ಯ ಹೋರಾಟಗಾರರ ಶ್ರಮದಿಂದ ಮತ್ತು ಸರ್ದಾರ ವಲ್ಲಬಬಾಯಿ ಪಟೇಲರ ಕಠಿಣ ನೀತಿಗನುಗುಣವಾಗಿ ಸೊಂಡೂರು ಸಂಸ್ಥಾನವು ಏಪ್ರಿಲ್ ೧, ೧೯೪೯ರಂದು ಭಾರತದ ಗಣರಾಜ್ಯದಲ್ಲಿ ವಿಲೀನವಾಯಿತು.[೨೪] ಸೊಂಡೂರು ಸಂಸ್ಥಾನ ಭಾರತ ಗಣರಾಜ್ಯದಲ್ಲಿ ವಿಲೀನಕ್ಕೆ ಒಪ್ಪಿತು. ಅದರಂತೆಯೇ ಕೇಂದ್ರ ಸರ್ಕಾರದೊಂದಿಗೆ ಮಹಾರಾಜರು ಹಲವಾರು ಷರತ್ತುಗಳೊಂದಿಗೆ ಒಪ್ಪಂದವನ್ನು ಮಾಡಿಕೊಂಡರು.

## ಕೊನೆ ಟಿಪ್ಪಣಿ

೦೧. ಸೊಂಡೂರು, ಭೂ ಹೋರಾಟ, ಅರುಣ ಜೋಳದ ಕೂಡ್ಲಿಗಿ, ಪುಟ-೩೦

೦೨. ಅದೇ, ಪುಟ-೩೦

೦೩. ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಪುಟ-೯೧

೦೪. ಅದೇ, ಪುಟ-೯೨

೦೫. ಅದೇ, ಪುಟ-೯೨

೦೬. ಅದೇ, ಪುಟ-೯೨

೦೭. ಅದೇ, ಪುಟ-೯೨

೦೮. ಅದೇ, ಪುಟ-೩೦

೦೯. ಅದೇ, ಪುಟ-೯೨

೧೦. ಅದೇ, ಪುಟ-೯೩

೧೧. ಅದೇ, ಪುಟ-೯೩

೧೨. ಲೊಹಾದ್ರಿ ಮಡಿಲು, ಸ್ಮರಣ ಸಂಚಿಕೆ, ಡಾ.ವೃಷಬೇಂದ್ರಚಾರ್, ಪುಟ-೧೨

೧೩. ಕಡಬಡಿ ಬಿ.ಕೆ., ವಡ್ಡಾರಾಧನೆ : ಒಂದು ಅಧ್ಯಯನ, ಪುಟ-೧೫೭, ೧೫೮

೧೪. ಪೂರ್ವೋಕ್ತ, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಪುಟ-೯೩

೧೫. ಸ್ಕಂದ ಶ್ರೀಗಂಧ, ಸ್ಮರಣ ಸಂಚಿಕೆ, ಮೃತ್ಯುಂಜಯ ರುಮಾಲೆ, ಪುಟ-೭

೧೬. ಅದೇ, ಪುಟ-೭

೧೭. ಬಳ್ಳಾರಿ ಜಿಲ್ಲೆಯ ಸ್ವಾತಂತ್ಯ ಹೋರಾಟ (ಸಂ)., ಬಿ.ಶೇಷಾದ್ರಿ, ಪುಟ-೧೩೩

೧೮. ಸೊಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ, ಡಾ.ಗಿರಿಜಾ, ಪುಟ-೬೦,೬೧

೧೯. ಅದೇ, ಪುಟ-೬೧

೨೦. ಅದೇ, ಪುಟ-೬೧

೨೧. ಅದೇ, ಪುಟ-೬೧

೨೨. ಅದೇ, ಪುಟ-೬೧

೨೩. ಪೂರ್ವೋಕ್ತ, (ಸಂ)., ಬಿ.ಶೇಷಾದ್ರಿ, ಪುಟ-೧೩೩

೨೪. ಅದೇ, ಪುಟ-೧೩೩

೨೫. ಅದೇ, ಪುಟ-೧೩೩

೨೬. ಪೂರ್ವೋಕ್ತ, ಡಾ.ಗಿರಿಜಾ, ಪುಟ-೬೨

೨೭. ಅದೇ, ಪುಟ-೬೨

೨೮. ಪೂರ್ವೋಕ್ತ, ಅರುಣ ಜೋಳದ ಕೂಡ್ಲಿಗಿ, ಪುಟ-೪೨

೨೯. ಅದೇ, ಪುಟ-೪೨

೩೦. ಪೂರ್ವೋಕ್ತ, (ಸಂ)., ಬಿ.ಶೇಷಾದ್ರಿ, ಪುಟ-೧೩೫

೩೧. ಅದೇ, ಪುಟ-೧೩೫

೩೨. ಪೂರ್ವೋಕ್ತ, ಅರುಣ ಜೋಳದ ಕೂಡ್ಲಿಗಿ, ಪುಟ-೪೩

೩೩. ಅದೇ, ಪುಟ-೪೩

ಅಧ್ಯಾಯ - ಐದು

# ಸೊಂಡೂರು ಸಂಸ್ಥಾನಿಕರ ಸಾಂಸ್ಕೃತಿಕ ಕೊಡುಗೆಗಳು

೫.೧. ಸಾಮಾಜಿಕ ಮತ್ತು ಆರ್ಥಿಕ ಕೊಡುಗೆ

೫.೨. ಘೋರ್ಪಡೆ ವಂಶದವರ ಅರಮನೆ

೫.೩. ಕೃಷ್ಣನಗರದ ಕೋಟೆ

೫.೪. ಘೋರ್ಪಡೆ ವಂಶದವರ ಹೆಸರಿನಲ್ಲಿರುವ ಗ್ರಾಮಗಳು

ಅಧ್ಯಾಯ - ಐದು

# ಸೊಂಡೂರು ಸಂಸ್ಥಾನಿಕರ ಸಾಂಸ್ಕೃತಿಕ ಕೊಡುಗೆಗಳು

### ೫.೧. ಸಾಮಾಜಿಕ ಮತ್ತು ಆರ್ಥಿಕ ಕೊಡುಗೆ

ಪರಸ್ಪರ ಸಂಬಂಧವುಳ್ಳ ಜನರ ವ್ಯವಸ್ಥಿತ ಸಮೂಹವನ್ನು ಸಮಾಜವೆನ್ನುತ್ತೇವೆ. ಈ ಸಮಾಜದಲ್ಲಿ ವರ್ಗ, ವರ್ಣ ಕುಟುಂಬ ಸಂಘಸಂಸ್ಥೆ ಮುಂತಾದ ಅಂಶಗಳಿದ್ದು ಅವು ಆಯಾ ಸಮಾಜದವರ ಒಪ್ಪಿತ ಮೌಲ್ಯಕ್ಕೆ ಬದ್ಧವಾಗಿರುತ್ತದೆ. ಅಂದರೆ ಅನುಕೂಲ ಮತ್ತು ಭದ್ರತೆಗೆ ಒಂದು ಬಗೆಯ ಒಪ್ಪಂದವು ಏರ್ಪಟ್ಟಿರುತ್ತದೆ. ಈ ವ್ಯವಸ್ಥೆ ವೇದಪೂರ್ವ, ವೇದ ಮತ್ತು ವೇದೋತ್ತರ ಕಾಲದಿಂದ ಮುನ್ನಡೆದು ಬಂದುದರಲ್ಲಿ ಕೆಲವು ಬದಲಾವಣೆಗಳು ಕಂಡುಬರುತ್ತವೆ. ಈ ಬದಲಾವಣೆ ಗುರುತಿಸುವಲ್ಲಿ ಆಯಾಕಾಲದ ಶಾಸನಗಳು ಸಮಕಾಲೀನ ಸಾಹಿತ್ಯಕೃತಿಗಳು ಮತ್ತು ಪ್ರಾಚ್ಯ ಅವಶೇಷಗಳು ಮುಂತಾದ ಆಕರಗಳು ಉಪಯುಕ್ತವಾದ ಮಾಹಿತಿಯನ್ನು ಒದಗಿಸುತ್ತವೆ.

### ೧. ವರ್ಗ, ವರ್ಣ ಮತ್ತು ಜಾತಿ ವ್ಯವಸ್ಥೆ

ಪ್ರಾಚೀನ ವರ್ಣಪದ್ಧತಿ ರೂಪುಗೊಳ್ಳುವ ಪೂರ್ವದಲ್ಲಿ ಋಗ್ವೇದವು ಸಮಾಜವನ್ನು ವೃತ್ತಿ ಗನುಗುಣವಾಗಿ ವರ್ಗೀಕರಣ ಮಾಡಿದ್ದನ್ನು ಉಲ್ಲೇಖಿಸಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಹಿಂದೂ ಸಮಾಜ ವ್ಯವಸ್ಥೆಯನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು ಒಳಗೊಂಡಿತ್ತು. ಇವೇ ಸಮಾಜದ ನಾಲ್ಕು ಜಾತಿಗಳಾಗಿದ್ದವು.[೧] ಸಾಮಾಜಿಕವಾಗಿ ವಿವಿಧ ವೃತ್ತಿ, ಬೇಧಗಳೇ ಚಾತುರ್ವರ್ಣ ವ್ಯವಸ್ಥೆಗೆ ಎಡೆಮಾಡಿಕೊಟ್ಟಿದೆ.

'ವಡ್ಡಾರಾಧನೆ'ಯಲ್ಲಿ ಶಿವಕೋಟ್ಯಾಚಾರ್ಯನು ಅಂದಿನ ಸಾಮಾಜಿಕ ವ್ಯವಸ್ಥೆಯ ವರ್ಣ, ವರ್ಗ ಜಾತಿಗಳನ್ನು ಉಲ್ಲೇಖಿಸುತ್ತಾ, ಅರಸ, ಸಾಮಂತರು, ಮಾಂಡಲೀಕ, ಕ್ಷತ್ರಿಯ, ಬ್ರಾಹ್ಮಣ, ಪುರೋಹಿತ, ಶ್ರೇಷ್ಠಿ, ಶೆಟ್ಟಿ ಮತ್ತು ಪುರದ ಒಕ್ಕಲು ಮಕ್ಕಳನ್ನು ವೈಶ್ಯರೆಂದೂ, ಹೊಲೆಯಮಾದಿಗರನ್ನು ಶೂದ್ರರೆಂದು,

ಕರೆಯುತ್ತಾನೆ.[೨] ಇಲ್ಲಿ ಬಂದಿರುವ ಸಾಮಂತರು ಎಂಬ ಪದವ ವಿಜಯ ನಗರ ಸಾಮ್ರಾಜ್ಯದ ಪತನಾನಂತರ ಸಂಸ್ಥಾನಿಕರೆಂದಾಗಿರಬಹುದು.

ಅ. ಪ್ರಭುವರ್ಗ

ಸಂಸ್ಥಾನಿಕರ ಸಾಮಾಜಿಕ ವ್ಯವಸ್ಥೆಯನ್ನು ಪ್ರಭುವರ್ಗ ಮತ್ತು ಶ್ರಮಿಕ ವರ್ಗವೆಂದು ೨ ರೀತಿಯಲ್ಲಿ ವಿಂಗಡಿಸಬಹುದು. ಪ್ರಭುವರ್ಗವು ಬ್ರಾಹ್ಮಣ ಅಥವಾ ಪುರೋಹಿತ ಮತ್ತು ಸಂಸ್ಥಾನಿಕರು ಹಾಗೂ ಅವರ ಅಧಿಕಾರಿಗಳನ್ನು ಒಳಗೊಂಡಿದ್ದ ವ್ಯವಸ್ಥೆಯಾಗಿದ್ದು, ಇವೆರಡು ವರ್ಗಗಳ ಮಧ್ಯದ ವ್ಯಾಪಾರಿಗಳು ತಮ್ಮ ಸುಧಾರಿತ ಆರ್ಥಿಕ ಸ್ಥಿತಿಯಿಂದ ಪ್ರಭುವರ್ಗವನ್ನು ಪ್ರತಿನಿಧಿಸುತ್ತಿದ್ದರು.

ಸಮಾಜದಲ್ಲಿ ಉನ್ನತ ಸ್ಥಾನ ಹೊಂದಿದ್ದ ಬ್ರಾಹ್ಮಣರು ತಮ್ಮ ಪುರೋಹಿತ ತನದಿಂದಾಗಿ ರಾಜಕೀಯದಲ್ಲೂ ಪ್ರಮುಖ ಸ್ಥಾನ ಹೊಂದಿದ್ದರು. ಸಂಸ್ಥಾನಿಕರು ನೇಮಿಸಿಕೊಂಡಿದ್ದ ಹಲವು ಮಂತ್ರಿಗಳು ದಿವಾನರು ಬ್ರಾಹ್ಮಣರಾಗಿದ್ದರು. ಇವರು ರಾಜನ ಅಭಿವೃದ್ಧಿಗೆ ಬಾಹ್ಯವಾಗಿ ಕಾರಣರಾಗಿದ್ದರು. ಅರಮನೆಯ ಸ್ತ್ರೀಯರಿಗೆ ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಸ್ವಾತಂತ್ರ್ಯವಿತ್ತು. ಸಮಾಜದಲ್ಲಿ ಅವರವರ ಸ್ಥಾನಮಾನಕ್ಕೆ ತಕ್ಕಂತೆ ವೇಷಭೂಷಣಗಳು ಬೇರೆ ಬೇರೆಯಾಗಿದ್ದವು. ಆಡಳಿತ ಸೂತ್ರ ಹಿಡಿದ ಸಂಸ್ಥಾನಿಕರು ಅವರ ರಾಣಿಯರು, ಅಧಿಕಾರ ವರ್ಗ ಇನ್ನು ಮುಂತಾದವರು ದಾನ ದತ್ತಿಗಳನ್ನು ನೀಡುವುದರ ಮೂಲಕ ಅವರನ್ನು ಪೋಷಿಸಿಕೊಂಡು ಬಂದಿದ್ದಾರೆ.

ಆ. ಶ್ರಮಿಕ ವರ್ಗ

ಕರಕುಶಲ ಕರ್ಮಿಗಳು ವಿವಿಧ ವೃತ್ತಿಗಳನ್ನು ಆಶ್ರಯಿಸಿದ್ದು, ಅವರೆಲ್ಲರೂ ಶ್ರಮಿಕ ವರ್ಗದವರಾಗಿದ್ದರು. ಅಕ್ಕಸಾಲಿ, ಕಮ್ಮಾರ, ಬಡಗಿ ಅವರನ್ನು ಕಲ್ಲುಕುಟಿಗರು ಎಂದು ಪ್ರಧಾನವಾಗಿ ಗುರುತಿಸಬಹುದು.

ಅಕ್ಕಸಾಲಿಗರು:- ಚಿನ್ನದ ಕೆಲಸ ಮಾಡುವ ಅಕ್ಕಸಾಲಿಗರು ಅಪರೂಪವಾಗಿ ತಾಮ್ರ ಶಾಸನಗಳನ್ನು ಕೆತ್ತುವುದದಷ್ಟೆ ಅಲ್ಲದೆ, ನಾಣ್ಯಗಳನ್ನು ತಯಾರಿಸುತ್ತಿದ್ದರು. ಸಂಸ್ಥಾನಿಕರು ಇವರಿಗೆ ವಾರ್ಷಿಕ ವೇತನವನ್ನು ಕೊಡುವ ಪದ್ಧತಿ ರೂಢಿಯಲ್ಲಿತ್ತು.

ಕಮ್ಮಾರರು:- ಕಬ್ಬಿಣದ ಕೆಲಸ ಮಾಡುವವರನ್ನು ಕಮ್ಮಾರರೆಂದು ಕರೆಯಲಾಗುತ್ತಿತ್ತು. ಇವರು ಸಮಾಜದ ಎಲ್ಲಾ ವರ್ಗದವರ ಮನೆಗಳಿಗೆ ಬೇಕಾದ ಉಪಕರಣಗಳನ್ನು ಅಂದರೆ ಒಕ್ಕಲಿಗರಿಗೆ ಕೃಷಿ ಉಪಕರಣಗಳನ್ನು ಹಾಗೂ ಅರಸರಿಗೆ ಯುದ್ಧಗಳಲ್ಲಿ ಉಪಯೋಗಿಸುವ ಖಡ್ಗ, ಗುರಾಣಿ ಮುಂತಾದ ಸಲಕರಣೆಗಳನ್ನು ತಯಾರಿಸುತ್ತಿದ್ದರು. ಸಂಸ್ಥಾನಿಕರ ಕಾಲದಲ್ಲಿ ಕಮ್ಮಾರರಿಂದ ನಾಡಬಂಧೂಕುಗಳು ಸಿದ್ಧವಾಗುತ್ತಿದ್ದವು.

ಬಡಿಗರು:- ಇವರು ಕಟ್ಟಿಗೆ ಕೆಲಸಮಾಡುವವರು. ರೈತರಿಗೆ ಬೇಕಾಗುವ ಉಪಕರಣಗಳನ್ನು, ಮನೆಮುಟ್ಟು ಹಾಗೂ ದೇವಾಲಯಗಳಲ್ಲಿನ ರಥಗಳನ್ನು ತಯಾರಿಸುತ್ತಿದ್ದರು.

ಕಲ್ಲು ಕುಟಿಗರು:- ಶಿಲ್ಪಿಗಳಾದ ಕಲ್ಲು ಕುಟಿಗರು ದೇವಾಲಯ ನಿರ್ಮಾಣ ಕೆಲಸ ಮಾಡುತ್ತಿದ್ದರು. ಇವರು ಸಾಮಾನ್ಯವಾಗಿ ತಮ್ಮ ಮೂಲಪುರುಷ ವಿಶ್ವಕರ್ಮನೆಂದು ಹೇಳಿಕೊಳ್ಳುತ್ತಾರೆ.

ಕುಂಬಾರ:- ಮನೆಗೆ ಬೇಕಾಗುವ ಮಡಿಕೆ ಕುಡಿಕ ಗಡಿಗೆ ಗಳನ್ನು ಕಂಬಾರರು ತಯಾರಿಸುತ್ತಿದ್ದರು. ಮಣ್ಣಿನ ಗಡಿಗೆ ಮಡಿಕೆ ಮಾಡಲು ಜಿಗುಟಾದ ಜೇಡಿ ಮಣ್ಣನ್ನು ಬಳಸುತ್ತಿದ್ದರು.

ಒಟ್ಟಿನಲ್ಲಿ ಅಂದಿನ ಜನರು ತಮ್ಮ ತಮ್ಮ ಕುಲ ವೃತ್ತಿಗಳನ್ನು ಅಪಾರವಾಗಿ ಗೌರವಿಸುತ್ತಿದ್ದರು. ಜಾತಿ, ಕಟ್ಟುಪಾಡುಗಳಿಗೆ ಹೆಚ್ಚಿನ ಬೆಲೆ ಕೊಡುತ್ತಿದ್ದರು. ಇದರಿಂದ ಅವರು ಸಮಾಜದಲ್ಲಿ ತಮ್ಮ ಗೌರವ ಹೆಚ್ಚುತ್ತದೆ ಎಂದು ನಂಬಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿ ವೃತ್ತಿಯಿಂದ ಸೂಚಿಸುವ ಜಾತಿಗಳು ಇದ್ದಂತೆ ಇಲ್ಲಿಯೂ ಅದೇ ಮಾದರಿಯಲ್ಲಿ ಜಾತಿಗಳು ಸ್ಪಷ್ಟವಾಗಿದ್ದವು. ಜಾತಿಗಳಲ್ಲಿ ಬ್ರಾಹ್ಮಣರು ರಾಜಕೀಯ, ಸಾಮಾಜಿಕ, ಧಾರ್ಮಿಕ ವಾಗಿ ಅಪಾರ ಗೌರವವನ್ನು ಪಡೆದವರಾಗಿದ್ದರು. ಸಂಸ್ಥಾನಿಕರಲ್ಲಿ ದಿವಾನರಾಗಿ ಇದ್ದುದು ಕಂಡು ಬರುತ್ತದೆ.[೩] ಅಂದಿನ ಸಮಾಜದಲ್ಲಿ ಕುಟುಂಬವು ಅವಿಭಾಜ್ಯ ಅಂಗವಾಗಿತ್ತು. ಒಂದು ದೃಷ್ಟಿಯಲ್ಲಿ ಕುಟುಂಬವನ್ನು ಪ್ರಥಮ ಸಮಾಜವೆಂದು ಕರೆಯಬಹುದು. ಕುಟುಂಬವು ಪಿತೃ ಪ್ರಧಾನವಾಗಿರುವುದು ಕಂಡುಬರುತ್ತದೆ. ಜೊತೆಗೆ ಅವಿಭಕ್ತ ಕುಟುಂಬಗಳು ಕಂಡುಬರುತ್ತಿದ್ದವು.

### ಶಿಕ್ಷಣ ವ್ಯವಸ್ಥೆ

ಇವರ ಕಾಲದಲ್ಲಿ ಶಿಕ್ಷಣ ಒದಗಿಸಿಕೊಡುವುದು ಪ್ರಮುಖ ಸಾಮಾಜಿಕ ಕಾರ್ಯವಾಗಿತ್ತು. ಪ್ರಾಚೀನ ಮತ್ತು ಮಧ್ಯಕಾಲೀನ ಶಿಕ್ಷಣವು ಅಗ್ರಹಾರ ದೇವಸ್ಥಾನ, ಮಠ, ಬ್ರಹ್ಮಪುರ ಮತ್ತು ಘಟಿಕಸ್ಥಾನಗಳಲ್ಲಿ ಕೊಡುತ್ತಿದ್ದರು. ಸಂಸ್ಥಾನಿಕರ ಅವಧಿಯಲ್ಲಿ ಸ್ವತಂತ್ರವಾದ ಶಾಲಾ ಕಟ್ಟಡಗಳು ಸಂಘ ಸಂಸ್ಥೆಗಳಿಂದ ಸಂಸ್ಥಾನಿಕರ ಹೆಸರಿನಿಂದ ಪ್ರಾರಂಭಗೊಂಡವು. ಎಲ್ಲಾ ವರ್ಗದವರಿಗೆ ಸಮಾನವಾಗಿ ಶಿಕ್ಷಣ ಕೊಡಲಾಗುತ್ತಿತ್ತು. ಸೊಂಡೂರು ಸಂಸ್ಥಾನದಲ್ಲಿ ೧೮೮೨ರಲ್ಲಿ ಶಾಲೆಗಳು ಪ್ರಾರಂಭವಾದರೂ ಅದಕ್ಕಿಂತ ಪೂರ್ವದಲ್ಲಿ ಅಗ್ರಹಾರಗಳಲ್ಲಿ ದೇವಸ್ಥಾನಗಳಲ್ಲಿ ಮಠಗಳಲ್ಲಿ ಶಿಕ್ಷಣ ಕೊಡಲಾಗುತ್ತಿತ್ತು.[೪] ೧೮೮೨ರಲ್ಲಿ ಕಿರಿಯ ಪ್ರಾಥಮಿಕ ಶಾಲೆಗಳು ಮತ್ತು ಬಾಲಕಿಯರ ಶಾಲೆಗಳು ಪ್ರಾರಂಭವಾದವು.[೫] ೧೮೮೭-೮೮ರಲ್ಲಿ ಕಟ್ಟಡಗಳು ನಿರ್ಮಾಣ ಮಾಡಿದರು.[೬] ಈ ಕಟ್ಟಡಗಳನ್ನು ನಿರ್ಮಾಣ ಮಾಡುವುದಕ್ಕೆ ವೀರಶೈವ ಕುಟುಂಬದವರು ಜಾಗವನ್ನು ನೀಡಿದ್ದರು. ಆದರೆ ಶಿಕ್ಷಣದ ಪ್ರಗತಿ ಮಾತ್ರ ಬಹಳ ನಿಧಾನಗತಿವಾಗಿತ್ತು.[೭] ಸಂಸ್ಥಾನಿಕರ ಮನೆತನಗಳ ಸ್ತ್ರೀಯರಿಗೆ ಮೇಲ್ವರ್ಗದವರ ಸ್ತ್ರೀಯರಿಗೆ ದೊರೆಯುವ ವಿದ್ಯೆ ಸಾಮಾನ್ಯ ಸ್ತ್ರೀಯರಿಗೆ ದೊರೆಯುತ್ತಿದ್ದುದು ಅತ್ಯಂತ ಕಡಿಮೆಯಾಗಿತ್ತು. ಬಾಲಕಿಯರ ಶಾಲೆಯನ್ನು ೧೮೯೮-೯೯ರಲ್ಲಿ ಲಂಡನ್ ಮಿಷನ್ ಸ್ಥಾಪಿಸಿದರು ಅದನ್ನು ಬ್ರಿಟನ್ ಸರ್ಕಾರದವರೆ ನಿರ್ವಹಿಸಿದರು.[೮]

### ನ್ಯಾಯಾಡಳಿತ

ಕೇಂದ್ರ ಸ್ಥಾನದಲ್ಲಿ ಅರಸನೇ ಮುಖ್ಯ ನ್ಯಾಯಾಧೀಶನಾದರೆ, ರಾಜ್ಯದ ಉಳಿದ ಭಾಗದಲ್ಲಿ ಆಡಳಿತ ನಡೆಸುವ ಗಾವುಂಡರು ತಮ್ಮ ಆಳ್ವಿಕೆಗೊಳಪಟ್ಟ ಪ್ರದೇಶಗಳಲ್ಲಿ ಮುಖ್ಯ ನ್ಯಾಯಾಧೀಶರಿದ್ದರು ಇವರ

ಕಾಲದಲ್ಲಿ ವಿವಿಧ ರೀತಿಯ ನ್ಯಾಯಾಲಯಗಳಿದ್ದವು, ಪ್ರಥಮ ಶ್ರೇಣಿ ಮ್ಯಾಜಿಸ್ಟ್ರೇಟ್ ಮತ್ತು ಜಿಲ್ಲಾ ಮುನ್ಸಿಫ್‌ಗಳು ಪ್ರಮುಖವಾಗಿದ್ದವು.[೯] ರಾಜನು ತಜ್ಞರೊಂದಿಗೆ ವಿಚಾರ ಮಾಡಿ ನಿಯಮಾವಳಿಗಳನ್ನು ರೂಪಿಸುತ್ತಿದ್ದನು. ರಾಜದ್ರೋಹ ವಿಶ್ವಾಸಘಾತಗಳಿಗೆ ಸಂಬಂಧಪಟ್ಟ ಕಾನೂನುಗಳನ್ನು ಸರಕಾರವು ವಿಧಿಸುತ್ತಿದ್ದಿತು. ಪ್ರಾಂತ್ಯದಲ್ಲಿ ಪಂಚಾಯಿತಿಗಳು, ಜಾತಿಯ ಹಿರಿಯರು ಮಠದ ಗುರುಗಳು ಸಂಘಗಳ ಮಹಾಜನರು ದೇವಾಲಯದ ಅಧಿಕಾರಿಗಳು ಅವರವರ ಕ್ಷೇತ್ರಗಳಿಗೆ ನ್ಯಾಯವಿಚಾರಣೆ ಮಾಡಲು ಸಾಕಷ್ಟು ಅಧಿಕಾರವಿತ್ತು.[೧೦] ಸಂಸ್ಥಾನದಲ್ಲಿ ಬ್ರಿಟೀಷರ ಹಸ್ತಕ್ಷೇಪವಾದಾಗ ೧೮೯೪ಮೇ ೨೯ರ ಭಾರತ ಸರ್ಕಾರದ ಸೂಚನೆಯಂತೆ ರಾಜಕೀಯ ಕಾರ್ಯ ಭಾರಿಯು ಆ ಸಂಸ್ಥಾನದಲ್ಲಿ ನ್ಯಾಯಾಲಯದ ಮುಖ್ಯಸ್ಥರಾಗಿದ್ದರು, ಕೆಳವರ್ಗದ ಜನರು ಇಲ್ಲಿ ಹೆಚ್ಚಾಗಿ ಅಪರಾಧ ಮಾಡುತ್ತಿದ್ದರು.[೧೧] ಅಪರಾದ ಮಾಡಿದ ಅಪರಾಧಿಗಳನ್ನು ಇಡುವುದಕ್ಕಾಗಿ ಜೈಲು ನಿರ್ಮಾಣ ಮಾಡಿಕೊಂಡಿದ್ದರು. ಅಲ್ಪಾವಧಿ ಮತ್ತು ದೀರ್ಘಾವದಿ ಶಿಕ್ಷೆಗೆ ಒಳಪಡುವ ಖೈದಿಗಳಿಗೆ ಒಂದೇ ಜೈನಲ್ಲಿನ ಇಡುತ್ತಿದ್ದರು. ಬ್ರಿಟಿಷರ ಕಾಲದಲ್ಲಿ ಪೋಲಿಸ್ ಸ್ಟೇಷನ್ ಕೂಡ ನಿರ್ಮಾಣ ಮಾಡಲಾಗಿತ್ತು. ಒಂದು ಜೈಲಿನ ಒಬ್ಬ ಇನ್ಸ್‌ಪೆಕ್ಟರ್ ಮತ್ತು ನಾಲ್ಕು ಮುಖ್ಯಪೇದೆಗಳು ಹಾಗೂ ೨೫ ಪೇದೆಗಳು ಇರುತ್ತಿದ್ದರು.[೧೨] ಈ ರೀತಿಯಾದ ಪೋಲಿಸ್ ಸ್ಟೇಷನ್‌ಗಳು ಸೊಂಡೂರು, ರಾಮದುರ್ಗಾ, ಕಣವಿಹಳ್ಳಿ ಮತ್ತು ಎತ್ತಿನ ಹಟ್ಟಿಯಲ್ಲಿ ಇದ್ದವು. ಜೊತೆಗೆ ಕಣಿವೆಗಳಲ್ಲಿ ೨ ಜೈಲುಗಳಿದ್ದವು ಇಂತಹ ಕಣಿವೆ ಜೈಲುಗಳು ಸೊಂಡೂರು, ಹೊಸಪೇಟೆ ಮಾರ್ಗದಲ್ಲಿದ್ದವು.[೧೩]

## ಆರೋಗ್ಯ ವ್ಯವಸ್ಥೆ

ಸಂಸ್ಥಾನಿಕರ ಕಾಲದಲ್ಲಿ ಆರೋಗ್ಯಕ್ಕೆ ಹೆಚ್ಚಿನ ಮಹತ್ವವನ್ನು ಕೊಡುತ್ತಿದ್ದರು. ೧೮೮೧ರಲ್ಲಿ ಪ್ರಥಮವಾಗಿ ಸೊಂಡೂರುನಲ್ಲಿ ಆಸ್ಪತ್ರೆಯನ್ನು ಕಟ್ಟಿಸಿದರು. ಅದಕ್ಕಿಂತ ಪೂರ್ವದಲ್ಲಿ ಗಿಡಮೂಲಿಕೆಗಳ ಮೂಲಕ ಕಾಯಿಲೆಗಳನ್ನು ಗುಣಪಡಿಸುತ್ತಿದ್ದರು. ೧೮೮೧ರಲ್ಲಿ ಕಟ್ಟಿಸಿದ ಆಸ್ಪತ್ರೆ ಬ್ರಿಟಿಷ್ ಅಧೀನದಲ್ಲಿತ್ತು. ಈ ಆಸ್ಪತ್ರೆಗೆ ಗ್ರಾಮೀಣ ಭಾಗದಿಂದ ಹೆಚ್ಚಾಗಿ ಜನರು ಮತ್ತು ಕೂಲಿ ಕಾರ್ಮಿಕರು ಬರುತ್ತಿದ್ದರು.[೧೪]

## ಸಂಸ್ಥಾನಿಕರ ಆರ್ಥಿಕ ವ್ಯವಸ್ಥೆ

ಸಮಾಜದ ಮಹತ್ವದ ಭಾಗವಾದ ಅರ್ಥವ್ಯವಸ್ಥೆ ತನ್ನ ವಿಶಾಲ ವ್ಯಾಪ್ತಿಯನ್ನು ಮತ್ತು ವೈವಿಧ್ಯತೆಯಿಂದಾಗಿ ಪ್ರಮುಖ ಸ್ಥಾನ ಪಡೆದಿದೆ. ಒಂದು ನಾಡಿನ ಇಲ್ಲವೆ ಒಂದು ಕಾಲದ ಅರ್ಥವ್ಯವಸ್ಥೆಯಲ್ಲಿ ಅಲ್ಲಿನ ನೈಸರ್ಗಿಕ ಸಂಪನ್ಮೂಲಗಳೊಂದಿಗೆ ಅವನ್ನೆಲ್ಲ ಸದುಪಯೋಗ ಪಡಿಸಿಕೊಳ್ಳುವ ಅಲ್ಲಿನ ಜನರ ದುಡಿಮೆಯ ಪರಿಶ್ರಮವು ಗಣನೀಯವಾಗಿದೆ. ಇದರಿಂದಾಗಿ ಆರ್ಥಿಕಾಭಿವೃದ್ಧಿ ಆ ನಾಡಿನ ಸಂಪನ್ಮೂಲಗಳ ಪ್ರಮಾಣ ಅವುಗಳ ಗುಣಮಟ್ಟ ಹಾಗೂ ಬಳಸಿಕೊಳ್ಳುವ ಸಾಮರ್ಥ್ಯಗಳಿಗೆ ಅನುಗುಣವಾಗಿ ನಿರ್ಧಾರಿತವಾಗುತ್ತದೆ. ಅರ್ಥವ್ಯವಸ್ಥೆಯಲ್ಲಿ ಪ್ರಥಮ ಆದ್ಯತೆ ನೀಡಲಾಗಿತ್ತು.

ಪ್ರಾಕೃತಿಕ ಸಂಪತ್ತಾದ ಭೂಮಿಯಲ್ಲಿ ನೀರು, ಆರಣ್ಯ, ಖನಿಜ, ಮತ್ತು ಜೀವಿಗಳೆಲ್ಲ ಅಂತರ್ಗತ ಆಗಿರುತ್ತವೆ. ಈ ಭೂಮಿಯೇ ಅಲ್ಲಿನ ಜನಗಳ ಜೀವನ ನಿರ್ವಹಣೆಗೆ ಆಧಾರ ಮತ್ತು ಆರ್ಥಿಕ ಭದ್ರತೆಯ

ಸಾಧನವು ಆಗಿದೆ. ಅಲ್ಲದೆ ಇದು ಮಾನವನ ಸಂಪತ್ತಿನ ಮೂಲವಾದುದರಿಂದ ಅವನ ಬಹುಪಾಲು ಜೀವನವು ಭೂಮಿಯನ್ನು ಅವಲಂಭಿಸಿತ್ತು. ಸೊಂಡೂರು ಸಂಸ್ಥಾನದಲ್ಲಿ ಕೃಷಿಯು ಬಹುಜನರ ಮುಖ್ಯಕಸಬು ಆಗಿತ್ತು. ಒಕ್ಕಲುತನ ಅರ್ಥವ್ಯವಸ್ಥೆಯ ಜೀವನಾಡಿ ಆಗಿದೆ. ಸಂಸ್ಥಾನದ ಅರಸರು ಸಂಸ್ಥಾನದಲ್ಲಿ ಕೃಷಿ ಮಾಡುವುದಕ್ಕೆ ಅನುಕೂಲ ಮಾಡಿಕೊಟ್ಟಿದ್ದರು. ಪ್ರಮುಖವಾಗಿ ಜೋಳ, ರಾಗಿ, ನವಣೆ, ಸಜ್ಜೆ, ತಂಬಾಕು ಇತ್ಯಾದಿ ಬೆಳೆಗಳನ್ನು ರೈತರು ಬೆಳೆಯುತ್ತಿದ್ದರು.[೧೫] ಪ್ರಸ್ತುತ ಮಳೆಯ ಅಭಾವದಿಂದ ಕಡಿಮೆ ಪ್ರಮಾಣದಲ್ಲಿ ಈ ಬೆಳೆಗಳನ್ನು ಬೆಳೆಯುತ್ತಿದ್ದಾರೆ.

ನೀರಾವರಿ

ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಅವಲಂಬಿಸಿತ್ತು. ಸಂಸ್ಥಾನಿಕರು ಅವರ ರಾಣಿಯರು, ಅಧಿಕಾರಿವರ್ಗ, ಶ್ರೀಮಂತರು ಮತ್ತು ಗ್ರಾಮ ಸಂಸ್ಥೆಗಳು ಕೆರೆ, ಬಾವಿಗಳನ್ನು ನಿರ್ಮಿಸುವುದು ಶ್ರೇಯಸ್ಕರವೆಂದು ನಂಬಿದ್ದರು.

ಭೂಮಿಯನ್ನು ೨ ರೀತಿಯಾಗಿ ವರ್ಗೀಕರಣ ಮಾಡಿಕೊಂಡಿದ್ದರು.

೧. ಕೃಷಿಗೆ ಯೋಗ್ಯವಾದ ಭೂಮಿ.

೨. ಕೃಷಿಗೆ ಯೋಗ್ಯವಲ್ಲದ ಭೂಮಿ.

ಸೊಂಡೂರು ಸಂಸ್ಥಾನದಲ್ಲಿ ೧೬೦ ಚದುರ ಮೈಲುಗಳು ಈ ಸಂಸ್ಥಾನದ ವಿಸ್ತೀರ್ಣವಾಗಿತ್ತು. ಅದರಲ್ಲಿ ಕೇವಲ ೧೯ ಚದುರ ಮೈಲುಗಳು ಕೃಷಿ ಮಾಡುತ್ತಿದ್ದರು. ಇನ್ನು ಉಳಿದ ಭೂ ಪ್ರದೇಶ ಕೃಷಿಗೆ ಯೋಗ್ಯವಾಗಿಲ್ಲದ ಪ್ರದೇಶವಾಗಿತ್ತು. ಅಂದರೆ ಅರಣ್ಯ ಕಾಡು ಮತ್ತು ಬೆಟ್ಟ ಗುಡ್ಡಗಳಿಂದ ಆವರಿಸಲ್ಪಟ್ಟಿತು.

೧೯ ಚದುರ ಮೈಲುಗಳಲ್ಲಿ ೧೫ ಚದುರ ಮೈಲುಗಳು ೯೫೦೦ ಎಕರೆ ವ್ಯವಸಾಯಕ್ಕೆ ಒಳಪಟ್ಟಿದ್ದು ಉಳಿದ ಪ್ರದೇಶ ಗ್ರಾಮಗಳ ಮತ್ತು ರಸ್ತೆಗಳು ನಿರ್ಮಾಣ ಮಾಡಲ್ಪಟ್ಟಿತು.[೧೬] ಈ ಸಮೀಕ್ಷೆಯನ್ನು ಮದ್ರಾಸ್ ಸಮೀಕ್ಷೆ ಇಲಾಖೆಯವರು ಮಾಡಿದ್ದರು. ೯೫೦೦ ಎಕರೆ ಭೂ ಪ್ರದೇಶವು ಕೃಷಿಗೆ ಒಳಪಟ್ಟಿತ್ತು. ಇದರಲ್ಲಿ ೩೫೦೦ ಎಕರೆ ಭೂಮಿಯನ್ನು ಗೇಣಿಗೆ ಕೊಡಲಾಗಿತ್ತು. ಗೇಣಿಯನ್ನು ಪಡೆದ ಭೂಮಿಗೆ ಕೇವಲ ೧ ಎಕರೆ ಭೂಮಿಗೆ ಎರಡು ಅನಾಸ್ ಕೊಡಬೇಕಾಗಿದ್ದಿತ್ತು.[೧೭]

ಸಂಸ್ಥಾನಿಕರ ಆದಾಯ ಮತ್ತು ತೆರಿಗೆ ಪದ್ಧತಿ

ಒಂದು ರಾಜ್ಯದ ಹಣಕಾಸು ವ್ಯವಸ್ಥೆ ಆಯಾ ರಾಜ್ಯದ ಅಭಿವೃದ್ಧಿಗೆ ಹಾಗೂ ಸುಭದ್ರತೆಯ ಸಂಕೇತವಾಗಿರುತ್ತದೆ. ಆದ್ದರಿಂದ ರಾಜ್ಯದ ಸಪ್ತಾಂಗಗಳಲ್ಲಿ ಕೋಶವು ಪ್ರಮುಖವಾಗಿದೆ. ಈ ಕೋಶವನ್ನು ತುಂಬುವ ಸಲುವಾಗಿ ರಾಜನು ವಿವಿಧ ಮೂಲಗಳಿಂದ ಹಣವನ್ನು ಸಂಗ್ರಹಿಸುತ್ತಿದ್ದನು. ಈ ಕೋಶವನ್ನು ತುಂಬಿಸಲು ಸಂಗ್ರಹಿಸುವ ಮಾರ್ಗವೇ ತೆರಿಗೆ ವಿಧಾನ. ಸೊಂಡೂರು ಸಂಸ್ಥಾನಿಕರ ಸರಕಾರದ ಬಹುದೊಡ್ಡ ಆದಾಯವೆಂದರೆ ಭೂ ಕಂದಾಯವಾಗಿತ್ತು. ಭೂಮಿಯ ಮೇಲೆ ವಿಧಿಸುತ್ತಿದ್ದ ತೆರಿಗೆಯು ಸರಕಾರದ ಬೊಕ್ಕಸವನ್ನು ತುಂಬಿಸುತ್ತಿತ್ತು. ತೆರಿಗೆಯನ್ನು ಎಕರೆಗೆ ಇಂತಿಷ್ಟು ಅಂತ ಮೊದಲೆ ನಿರ್ಧರಿಸಿ ಆನಂತರ

ವಸೂಲಿ ಮಾಡುತ್ತಿದ್ದರು. ಈ ತೆರಿಗೆಯನ್ನು ವಸೂಲಿ ಮಾಡುವುದಕ್ಕಾಗಿ ವಿವಿಧ ಅಧಿಕಾರಿಗಳನ್ನು ನೇಮಕ ಮಾಡುತ್ತಿದ್ದರು.

ಕಂದಾಯ ವಸೂಲಿ ಮಾಡುವ ಪದ್ಧತಿ ಬಹಳ ಕಠಿಣವಾಗಿತ್ತು. ಪ್ರತಿಯೊಂದು ಹೊಲಗಳಿಗೆ ಐದು ವರ್ಷದ ಗುತ್ತಿಗೆ ಆಧಾರದ ಮೇಲೆ ಭೂಮಿಯನ್ನು ನೀಡುತ್ತಿದ್ದರು ಯಾರು ಅತಿ ಹೆಚ್ಚು ಹಣ ನೀಡುವರೊ ಅವರಿಗೆ ಈ ಭೂಮಿ ಸಿಗುತ್ತಿತ್ತು. ಕೃಷಿಯ ಅಭಿವೃದ್ಧಿಗೆ ಸಂಸ್ಥಾನಿಕರು ವಿವಿಧ ಕೆಲಸ ಕಾರ್ಯಗಳನ್ನು ಮಾಡಿದ್ದರು. ಬಾವಿಗಳು, ಕಾಲುವೆಗಳು, ನಿರ್ಮಾಣ ಮಾಡಿದ್ದರು. ರಸ್ತೆಯ ಪಕ್ಕದಲ್ಲೇ ಮರಗಳನ್ನು ನೆಡುತ್ತಿದ್ದರು. ೨/೩ ರಷ್ಟು ಕಂದಾಯವನ್ನು ಸಂಗ್ರಹಣೆ ಮಾಡುತ್ತಿದ್ದರು. ಈ ಭಾಗದಲ್ಲಿ ಬ್ರಿಟಿಷರು ರೈತವಾರಿ ಪದ್ಧತಿಯನ್ನು ಜಾರಿಗೆ ತಂದಿದ್ದರು. ಭೂಮಿಯ ವಿಸ್ತೀರ್ಣದ ಆಧಾರದ ಮೇಲೆ ಕಂದಾಯವನ್ನು ಸಂಗ್ರಹಿಸುತ್ತಿದ್ದರು. ತೆರಿಗೆಯನ್ನು ವರ್ಷದಲ್ಲಿ ಎರಡು ಬಾರಿ ಸಂಗ್ರಹಣೆ ಮಾಡುತ್ತಿದ್ದರು. ೨/೩ ರಷ್ಟು ಕಂದಾಯ ಡಿಸೆಂಬರ್‌ನಲ್ಲಿ ಮತ್ತು ೧/೩ ರಷ್ಟು ಫೆಬ್ರವರಿಯಲ್ಲಿ ಸಂಗ್ರಹಿಸುತ್ತಿದ್ದರು.[೧೮]

ಕುಮಾರಸ್ವಾಮಿ ದೇವಾಲಯದ ಪ್ರದೇಶದಲ್ಲಿ ಬರುವ ಸುಮಾರು ೧೩ ಹಳ್ಳಿಗಳ ತೆರಿಗೆಯನ್ನು ದೇವಾಲಯಕ್ಕೆ ದತ್ತಿಯನ್ನು ಕೊಡುತ್ತಿದ್ದರು. ಜೊತೆಗೆ ಕುಮಾರಸ್ವಾಮಿ ದೇವಾಲಯದ ಜೀರ್ಣೋದ್ಧಾರದ ಕೆಲಸ ಕಾರ್ಯಗಳು ಕೂಡ ಇವರ ಕಾಲದಲ್ಲಿ ನಡೆಯಿತು. ರಾಜರ ಸಂಬಂಧಿಕರು ಯಾವುದೇ ತೆರಿಗೆಯನ್ನು ಕಟ್ಟುತ್ತಿರಲಿಲ್ಲ. ಬರಗಾಲದ ಸಂದರ್ಭದಲ್ಲಿ ಕಡ್ಡಾಯವಾಗಿ ಕಂದಾಯವನ್ನು ವಸೂಲಿ ಮಾಡುತ್ತಿರಲಿಲ್ಲ.

ಸೊಂಡೂರು ಸಂಸ್ಥಾನಿಕರ ಬಹುದೊಡ್ಡ ಖರ್ಚು ಎಂದರೆ ಬ್ರಿಟಿಷರ ಅಧೀನದಲ್ಲಿ ಆಳ್ವಿಕೆ ನಡೆಸುವುದಕ್ಕಾಗಿ ಅವರಿಗೆ ಕಪ್ಪವನ್ನು ನೀಡುವುದು ಹಾಗೂ ಹೈದರಾಲಿ ಟಿಪ್ಪುವಿನೊಡನೆ ಯುದ್ಧಗಳಿಗೆ ಸಾಕಷ್ಟು ವ್ಯಯವಾಗುತ್ತಿತ್ತು. ಸಂಸ್ಥಾನವನ್ನು ರಕ್ಷಿಸುವುದು ಮತ್ತು ವಿಸ್ತರಿಸುವುದು ಇವರ ಪ್ರಮುಖ ಕಾರ್ಯವಾಗಿತ್ತು. ಈ ಕಾರ್ಯಕ್ಕೆ ಸಾಕಷ್ಟು ಹಣವನ್ನು ವ್ಯಯ ಮಾಡಬೇಕಾಗುತ್ತಿತ್ತು.

### ಶ್ರೀ ಶಿವವಿಲಾಸ ರಾಜಮಹಲ್ ಅರಮನೆ

ಸೊಂಡೂರಿನ ಘೋರ್ಪಡೆ ಮಹಾರಾಜರ ಶ್ರೀ ಶಿವವಿಲಾಸ್ ರಾಜಮಹಲ್ ಸೊಂಡೂರಿನಿಂದ ಹೊಸಪೇಟೆಗೆ ಹೋಗುವ ಮಾರ್ಗದಲ್ಲಿದೆ. ಈ ಅರಮನೆಯನ್ನು ೧೯೩೮ರಲ್ಲಿ ನಿರ್ಮಿಸಲುಪ್ರಾರಂಭಿಸಿದರು. ೧೯೪೦ರಲ್ಲಿ ಪೂರ್ಣಗೊಳಿಸಲಾಯಿತು.[೧೯] ಈ ಸಂದರ್ಭದಲ್ಲಿ ಸೊಂಡೂರಿನ ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರು ಆಳ್ವಿಕೆ ಮಾಡುತ್ತಿದ್ದರು. ಇವರು ಬ್ರಿಟಿಷ್ ಆಡಳಿತಾಧಿಕಾರಿಗಳಿಗೆ ನಿಷ್ಠೆಯಿಂದ ಇದ್ದು ಬ್ರಿಟಿಷರ ಸಹಾಯದಿಂದಲೇ ಈ ಅರಮನೆಯನ್ನು ಕಟ್ಟಿಸಿದ್ದರು. ಈ ಅರಮನೆಯಲ್ಲಿ ದರ್ಬಾರ್ ಹಾಲ್, ದೇವಸ್ಥಾನಗಳು ಇದ್ದವು. ಸೊಂಡೂರು ಗ್ರಾಮದ ಮಧ್ಯದಲ್ಲಿರುವ ಹಳೆಯ ಅರಮನೆಯಲ್ಲಿ ಕೂಡ ಇಂಥವು ಇದ್ದವು. ಈಗ ಈ ಹಳೆಯ ಅರಮನೆಯಲ್ಲಿ ಖಾದಿ ನೇಯ್ಗೆಯ ಕೆಲಸ ನಡೆಯುತ್ತಿದೆ.[೨೦]

ಈ ಅರಮನೆಯು ೨೦ ಎಕರೆ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿದೆ. (೧೭೫೦೦ ಚದುರ ಅಡಿ ಅಗಲದಲ್ಲಿ ಕೆಳಗಿನ ಕಟ್ಟಡವನ್ನು ನಿರ್ಮಿಸಲಾಗಿದೆ.) ಈ ಅರಮನೆಯು ಎರಡು ಅಂತಸ್ತಿನ ಮಹಲು

ಆಗಿದ್ದು ನೆಲ ಮಹಡಿಯಲ್ಲಿ ೧೫ಕೋಣೆಗಳು ಹಾಗೂ ಮೇಲಿನ ಅಂತಸ್ತಿನಲ್ಲಿ ೧೫ ಕೋಣೆಗಳಿವೆ. ಕೆಳಗಿನ ಕಟ್ಟಡ ೧೭೫೦೦ ಚದುರ ಅಡಿ ಅಗಲದಲ್ಲಿ ಕಟ್ಟಡವನ್ನು ನಿರ್ಮಿಸಲಾಗಿದೆ. ಇದರ ಉದ್ದ ಸುಮಾರು ನೂರು ಅಡಿ ಇದೆ. ಈ ಕಟ್ಟಡಕ್ಕೆ ಆಧುನಿಕ ತಂತ್ರಜ್ಞಾನವನ್ನು ಬಳಸಲಾಗಿದ್ದು, ಮಿಸನರಿ ಗ್ರಾನೈಟ್, ಕಾಂಕ್ರಿಟನ್ನು ಬಳಸಲಾಗಿದೆ. ಈ ಅರಮನೆಯ ಗೋಡೆಗಳು ಎರಡುವರೆ ಅಡಿ ದಪ್ಪ ಇದ್ದು. ನೆಲಕ್ಕೆ ಕಡಪ ಕಲ್ಲನ್ನು ಹಾಸಲಾಗಿದೆ. ಬಾಗಿಲುಗಳು ಮತ್ತು ಕಿಟಕಿಗಳಿಗೆ ತೆಗದ ಕಟ್ಟಿಗೆಯನ್ನು ಅಳವಡಿಸಲಾಗಿದೆ.

ಈ ಅರಮನೆಯು ಕಛೇರಿ, ಗ್ರಂಥಾಲಯ, ದೇವಸ್ಥಾನಗಳು, ದರ್ಬಾರ್ ಹಾಲ್‌ಗಳನ್ನು ಒಳಗೊಂಡಿದೆ. ಜೊತೆಗೆ ಈ ಅರಮನೆಯಲ್ಲಿರುವ ಪ್ರತಿಯೊಂದು ಕೋಣೆಗಳಿಗೂ ಸ್ನಾನ ಗೃಹಗಳಿರುವುದು ಅತ್ಯಂತ ವಿಶೇಷವಾಗಿದೆ. ಹಾಗೂ ಮಧ್ಯದಲ್ಲಿ ವಿಶಾಲವಾದ ಪ್ರಕಾರವನ್ನು ಹೊಂದಿದೆ. ಈ ಕಟ್ಟಡವು ಆಯಾತಾಕಾರವಾಗಿದ್ದು ಮೇಲ್ಭಾಗದಲ್ಲಿ ೫ ಗುಮ್ಮಟಗಳಿವೆ, ನಾಲ್ಕು ಮೂಲೆಯಲ್ಲಿ ನಾಲ್ಕು ಗುಮ್ಮಟಗಳು ಹಾಗೂ ಮುಂಭಾಗದಲ್ಲಿ ಒಂದು ಗುಮ್ಮಟ ಇದೆ. ಮೇಲಿನ ಅಂತಸ್ತಿನಲ್ಲಿ ಮೊಗಸಾಲೆ ಇದ್ದು ಕಮಾನುಗಳಿಂದ ಅಲಂಕೃತವಾಗಿದೆ. ಈ ಅರಮನೆಯು ಇಂಡೋ ಸಾರ್ಸೆನಿಕ್ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿದೆ. ದೀರ್ಘಕಾಲ ಬಾಳಿಕೆ ಬರುವಂತಹ ವಸ್ತುಗಳನ್ನು ಉಪಯೋಗಿಸಿಕೊಂಡು ಈ ಅರಮನೆಯನ್ನು ನಿರ್ಮಿಸಲಾಗಿದೆ.

ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರ ಅಧಿಕಾರವಧಿಯಲ್ಲಿ ನಿರ್ಮಾಣವಾದ ಈ ಅರಮನೆಯ ಗೃಹ ಪ್ರವೇಶದ ಸಮಾರಂಭಕ್ಕೆ ಅಧಿಕಾರವರ್ಗದವರು, ಗಣ್ಯರು, ರಾಜಕೀಯ ವರ್ಗದವರು, ಸಾಕಷ್ಟು ಜನ ಸೇರಿದ್ದರು. ಈ ಅರಮನೆಯಲ್ಲಿ ಘೋರ್ಪಡೆ ಕುಟುಂಬದವರು ಅಲ್ಲೇ ವಾಸಿಸುತ್ತಿದ್ದರು.

ಈ ಅರಮನೆಯನ್ನು ಪ್ರಸ್ತುತ ಸಂದರ್ಭದಲ್ಲಿ ಸ್ಕಂದ ಲಿಮಿಟೆಡ್ ಕಂಪನಿಯವರ ಅಧೀನದಲ್ಲಿದ್ದು, ಅದನ್ನು ಹೋಟೆಲ್ ಆಗಿ ಮಾಡಿಕೊಂಡಿದ್ದಾರೆ. ಹೊರಗಡೆ ಮಾತ್ರ ಅರಮನೆಯಂತೆ ಕಾಣುವ ಈ ಅರಮನೆ ಒಳಗಡೆ ಸಂಪೂರ್ಣ ಬದಲಾವಣೆಯನ್ನು ಮಾಡಿದ್ದಾರೆ.

### ಕೃಷ್ಣ ನಗರದ ಕೋಟೆ

ಕೃಷ್ಣ ನಗರ ಸೊಂಡೂರಿಗೆ ಹೊಂದಿಕೊಂಡಿದೆ. ಬಳ್ಳಾರಿಗೆ ಹೋಗುವ ಮಾರ್ಗದಲ್ಲಿ ಈ ನಗರ ಬರುತ್ತದೆ. ಇದರ ಆಗ್ನೇಯ ದಿಕ್ಕಿಗೆ ದೋಣಿಮಲೈ (ಎನ್‌ಎಂಡಿಸಿ) ಇದೆ. ದಕ್ಷಿಣಕ್ಕೆ ಕೂಮಾರಸ್ವಾಮಿ ಬೆಟ್ಟ ಇದೆ. ಇದು ಸಮುದ್ರ ಮಟ್ಟದಿಂದ ೨೪೦೦ ಅಡಿ ಎತ್ತರವಾಗಿದೆ. ಇಲ್ಲಿ ದಟ್ಟವಾದ ಕಾಡು ಇದೆ. ಪಶ್ಚಿಮಕ್ಕೆ ೧೮ನೇ ಶತಮಾನದಲ್ಲಿ ನಿರ್ಮಾಣವಾದ ದಟ್ಟವಾದ ಕಾಡಿನ ಮಧ್ಯೆ ದೌಲತ್ ಬಾದ್ ಇದೆ. ಇದರ ಪೂರ್ವಕ್ಕೆ ಇರುವುದೇ ಕೃಷ್ಣ ನಗರ.[೨]

ಹೈದರನು ಕ್ರಿ.ಶ.೧೭೬೭-೬೯ರಲ್ಲಿ ನಡೆದ ಆಂಗ್ಲೋ ಮೈಸೂರು ಯುದ್ಧದ ನಂತರ ಕ್ರಿ.ಶ. ೧೭೬೯ರಲ್ಲಿ ಹೈದರನು ಬ್ರಿಟೀಷರ ಪ್ರದೇಶಗಳನ್ನು ಗೆದ್ದುಕೊಂಡನು. ಹಾಗೂ ತನ್ನ ಸಾಮ್ರಾಜ್ಯವನ್ನು ಮದ್ರಾಸಿನವರೆಗೆ ವಿಸ್ತರಿಸಿದನು. ೧೭೮೦ರವರೆಗೆ ಇಂಗ್ಲೀಷರು ತಟಸ್ಥರಾಗಿದ್ದರು. ಈ ಸಮಯದಲ್ಲಿ ತನ್ನ ರಾಜ್ಯದಲ್ಲಿ ಶಾಂತಿ ನೆಲೆಸಿತ್ತು. ಆಗ ಕ್ರಿ.ಶ.೧೭೭೬ರಲ್ಲಿ ಕೃಷ್ಣನಗರದ ಕೋಟೆ ನಿರ್ಮಾಣದ ಕಾರ್ಯವನ್ನು

ಆರಂಭಿಸಿದ.[೨೨] ೧೭೭೯ರಲ್ಲಿ ಚಿತ್ರದುರ್ಗದ ಮದಕರಿನಾಯಕನನ್ನು ಸೋಲಿಸಿ, ಚಿತ್ರದುರ್ಗವನ್ನು ಮೈಸೂರಿಗೆ ಸೇರಿಸಿಕೊಂಡನು. ಹೀಗೆ ತನ್ನ ದಂಡಯಾತ್ರೆಗಳಿಂದ ಉತ್ತರದಲ್ಲಿ ಧಾರವಾಡ ಮತ್ತು ಬಳ್ಳಾರಿಗಳವರೆಗೂ ಮೈಸೂರು ರಾಜ್ಯ ವಿಸ್ತರಿಸಲ್ಪಟ್ಟಿತು. ತಾನು ಗೆದ್ದ ರಾಜ್ಯಗಳ ರಕ್ಷಣೆಗಾಗಿ ಅಪಾರ ಮದ್ದು ಗುಂಡುಗಳನ್ನು ಸಂಗ್ರಹಿಸಿದ ಇವುಗಳನ್ನು ಇಡುವುದಕ್ಕಾಗಿಯೇ ಕೃಷ್ಣನಗರದಲ್ಲಿ ಪ್ರತ್ಯೇಕವಾದ ಐದು ಮದ್ದುಗುಂಡಿನ ಉಗ್ರಾಣಗಳನ್ನು ನಿರ್ಮಿಸಿದ್ದಾನೆ.

ಕೃಷ್ಣಾನಗರದ ಕೋಟೆಯನ್ನು ಹೈದರಾಲಿಯು ಸೊಂಡೂರಿನ ಮುರಾರಿರಾವ್ ಘೋರ್ಪಡೆಯನ್ನು ಸೋಲಿಸಿದ ನಂತರ ಕ್ರಿ.ಶ. ೧೭೭೬ರಲ್ಲಿ ಈ ಕೋಟೆಯನ್ನು ನಿರ್ಮಿಸಲು ಆರಂಭಿಸಿದನು. ಮುಂದೆ ಟಿಪ್ಪುಸುಲ್ತಾನನು ಇದನ್ನು ೧೭೯೨ರಲ್ಲಿ ಪೂರ್ಣಗೊಳಿಸಿದನು.[೨೩] ಚೌಕಾಕಾರದ ಈ ಕೋಟೆಯನ್ನು ನಿರ್ಮಿಸಲು ಮಧ್ಯಮ ಗಾತ್ರದ ಕಲ್ಲು ಮತ್ತು ಗಾರೆಯನ್ನು ಬಳಸಲ್ಪಟ್ಟಿದೆ. ಕೋಟೆಯ ಮೇಲ್ಭಾಗದಲ್ಲಿಯ ಕೈಪಿಡಿ ಗೋಡೆಯನ್ನು ಇಟ್ಟಿಗೆ ಗಾರೆಯನ್ನು ಬಳಸಿ ನಿರ್ಮಿಸಲ್ಪಟ್ಟಿದೆ. ಕೋಟೆಯ ಪೂರ್ವ ದಿಕ್ಕಿನ ಗೋಡೆಯ ಮಧ್ಯದಲ್ಲಿದೊಡ್ಡಬಾಗಿಲು ಮತ್ತು ದಕ್ಷಿಣ ದಿಕ್ಕಿನ ಗೋಡೆಯ ಮಧ್ಯದಲ್ಲಿ ಚಿಕ್ಕ ದಿಡ್ಡಿ ಬಾಗಿಲುಗಳಿವೆ. ಅವುಗಳಲ್ಲಿ ನಾಲ್ಕು ಮೂಲೆಗಳಲ್ಲಿರುವ ಬುರುಜುಗಳು ದೊಡ್ಡದಾಗಿವೆ. ಕೋಟೆಯ ಸುತ್ತಲು ಸುಮಾರು ೩೫ ಅಡಿ ಅಗಲ ಮತ್ತು ೨೦ ಅಡಿ ಆಳವಾದ ಕಂದಕವಿದೆ.[೨೪]

ಮೂರು ಬಾಗಿಲುಗಳ ಮೂಲಕ ಪ್ರವೇಶವನ್ನು ಅಂದರೆ ಒಳಗೆ ಹೋಗಲು ಅವಕಾಶವನ್ನು ಮಾಡಲಾಗಿದೆ. ಕೋಟೆಗೋಡೆಯಲ್ಲಿ ಪೂರ್ವಕ್ಕೆ ಎದುರಾಗಿ ಒಳಬಾಗಿಲಿನ ಪಕ್ಕದಲ್ಲಿನ ಎರಡು ಕಡೆಯಿಂದ ಮುಂದೆ ಪೂರ್ವಕ್ಕೆ ಚಾಚಿದ ಗೋಡೆಗಳ ಮಧ್ಯದಲ್ಲಿ ಉತ್ತರ ಮತ್ತು ದಕ್ಷಿಣವಾಗಿರುವ ಮತ್ತೊಂದು ಗೋಡೆಯನ್ನು ಕಟ್ಟಿ ಒಳ ಆವರಣವನ್ನು ನಿರ್ಮಿಸಲಾಗಿದೆ. ಒಳ ಆವರಣ ಮತ್ತು ಹೊರ ಆವರಣ ಪೂರ್ವ ದಿಕ್ಕಿಗೆ ಇರುವ ಮಧ್ಯಭಾಗದಲ್ಲಿ ಬಾಗಿಲು ಮೂಲೆಗಳಲ್ಲಿ ಬುರುಜುಗಳಿವೆ. ಸರಳವಾದ ಈ ಬಾಗಿಲಿನ ಮೇಲೆ ದುಂಡನೆಯ ಕಮಾನಿದೆ. ಈ ಆವರಣದ ಗೋಡೆ ಹೆಚ್ಚು ಎತ್ತರವಿಲ್ಲ. ಇಟ್ಟಿಗೆ ಮತ್ತು ಗಾರೆಯ ಕೈಪಿಡಿ ಗೋಡೆಯಲ್ಲಿ ಬಂದೂಕ ಕಿಂಡಿಗಳಿವೆ.

ಬಾಗಿಲಿನ ಈ ಶಾನ್ಯಕ್ಕಿರುವ ಬುರುಜಿನ ಮೇಲೆ ಮೂರು ತೋಪು, ಸಂಧಿಗಳಿವೆ. ಆಗ್ನೇಯಕ್ಕಿರುವ ಬುರುಜು ಶಿಥಿಲವಾಗಿದೆ. ಈ ಆವರಣದ ಗೋಡೆ ಸುಮಾರು ೨೫ ಅಡಿ ಎತ್ತರವಿದೆ. ದೊಡ್ಡದಾಗಿರುವ ಬಾಗಿಲ ತೋಳಿನ ಮಧ್ಯ ಭಾಗದಲ್ಲಿ ಉಬ್ಬಿದ ಪಟ್ಟಿ ಮತ್ತು ಕೆಳಮೂಲೆಯಲ್ಲಿ ಮುಂದೆ ಬಾಚಿದ ಪುಷ್ಪ ದಳವಿದೆ ಮೇಲೆ ಎರಡು ಬೋದಿಗೆಗಳಿವೆ. ಪ್ರವೇಶದ ಪಾರ್ಶ್ವಗಳಲ್ಲಿಯ ಕಟ್ಟೆಗಳನ್ನುಮೂರು ರಂಗಗಳಿಂದ ನಿರ್ಮಿಸಿದೆ. ಕಟ್ಟೆಗಳ ಮೇಲಿನ ಕಂಬಗಳಲ್ಲಿ ಮೂರು ಚೌಕ ಮತ್ತು ಎರಡು ಅಷ್ಟಭುಜಾಕೃತಿಯ ಭಾಗಗಳಿವೆ. ಪಾರ್ಶ್ವದ ಗೋಡೆಗಳು ಕೊನೆಯಾಗುವ ಅಂಚಿನಲ್ಲಿ ಕೊತ್ತಳಗಳಿವೆ. ಒಳಗಿನ ಬಾಗಿಲು ಪ್ರಧಾನ ಕೋಟೆ ಗೋಡೆಯಲ್ಲಿ ಪೂರ್ವಾಭಿಮುಖವಾಗಿದೆ. ಈ ಹಿಂದಿನ ಬಾಗಿಲುಗಳಿಗಿಂತಲೂ ಇದು ಬಹುದೊಡ್ಡದಾಗಿದೆ. ಮತ್ತು ಪ್ರಧಾನವಾಗಿದೆ. ಒಳ ಆವರಣದ ಗೋಡೆಯ ಮೇಲಿನಿಂದ ಪ್ರಧಾನ

ಕೋಟೆಗೋಡೆಯ ಮೇಲೆ ಬರಲು ಎರಡು ಬದಿಯಿಂದ ದಾರಿಗಳಿವೆ. ದಕ್ಷಿಣ ಗೋಡೆಯಲ್ಲಿ ಕಾವಲುಗಾರರ ನಾಲ್ಕು ಗೂಡುಗಳಿವೆ. ಪ್ರಧಾನ ಕೋಟೆ ಗೋಡೆಯಲ್ಲಿರುವುದೇ ಗೋನೆಯ ಅಥವಾ ಒಳ ಬಾಗಿಲು ದೊಡ್ಡದಾಗಿರುವ ಈ ಬಾಗಿಲಿಗೆ ಎರಡು ಬಾಗಿಲು ಚೌಕಟ್ಟುಗಳಿವೆ. ಒಳಚೌಕಟ್ಟಿನ ತೋಳಿನ ಒಳ ಬದಿಯನ್ನು ಆನೆಯ ಸೊಂಡಿಲಿನಿಂದ. ಹೋರ ಬಂದ ತೋರಣದಿಂದ ಮೂಲೆಯನ್ನು ಪುಷ್ಪದಳಗಳಿಂದ ಮತ್ತು ಹೊರ ಬದಿಯನ್ನು ವ್ಯಾಳದಿಂದ ಹೊರ ಬಂದ ಬಳ್ಳಿ ಸುರುಳಿಗಳಿಂದ ಅಲಂಕರಿಸಲಾಗಿದೆ. ಬಾಗಿಲ ಒಳ ಬದಿಗೆ ಬಾಳೆಯ ಮೊಗ್ಗಿನ ಆಕಾರದ ಬೋದಿಗೆ ಮತ್ತು ಮುಂಭಾಗದಲ್ಲಿ ವ್ಯಾಳದ ಬಾಯಿಯಿಂದ ಹೊರಬಂದ ಬಾಳೆಯ ಮೊಗ್ಗಿನ ಆಕಾರದ ಬೋದಿಗೆಗಳಿವೆ. ಈ ಬಾಗಿಲ ಪಕ್ಕದಲ್ಲಿ ಒಂದು ಚಿಕ್ಕ ಎಡಬಾಗಿಲಿದೆ. ಈ ಎಡ ಬಾಗಿಲನ್ನು ನಾಲ್ಕು ಭಾಗಗಳಾಗಿ ವಿಭಜಿಸಿ ವಜ್ರಾಕೃತಿಯ ವಿನ್ಯಾಸಗಳಿಂದ ಅಲಂಕರಿಸಿದೆ. ಎರಡು ಬಾಗಿಲುಗಳ ಮಧ್ಯದಲ್ಲಿ ಗೋಡೆಯ ಮೇಲೆ ಮಿಥುನ ಮತ್ತು ಪ್ರಾಣಿ ಶಿಲ್ಪವಿದೆ. ಬಾಗಿಲ ಮೇಲಿನ ಕೈಪಿಡಿ ಗೋಡೆಯನ್ನು ಇಟ್ಟಿಗೆ, ಗಾರೆಯ ಶಿಲ್ಪದಿಂದ ತೆನೆಗಳಿಂದ ಅಲಂಕರಿಸಿದೆ. ಬಾಗಿಲಿನ ಒಂದು ಭಾಗವು ಮಾತ್ರ ಕದ ಉಳಿದಿದೆ. ಪ್ರವೇಶದ ಹಿಂಬದಿಗಿರುವ ಕಟ್ಟೆಯ ಮೇಲೆ ಆರು ಕಂಬಗಳು ನಾಲ್ಕು ಮೂಲೆಗಂಬದ ಆರು ಅರ್ಧಗಂಬಗಳನ್ನು ಅಳವಡಿಸಲಾಗಿದೆ. ಈ ಕಂಬಗಳು ಕೆಳಭಾಗ ಚೌಕಕಾರವಾಗಿ ಮೇಲ್ಭಾಗ ಅಷ್ಟಾಭುಜಾಕೃತಿಯನ್ನು ಹೊಂದಿದೆ. ಕಂಬದ ಗಾತ್ರದ ಮೇಲೆ ಕೈ ಮುಗಿದು ನಿಂತಿರುವ ಪುರುಷನ ಉಬ್ಬುಶಿಲ್ಪವಿದೆ. ಉತ್ತರ ಮತ್ತು ದಕ್ಷಿಣಗೋಡೆಗಳಲ್ಲಿ ಕಮಾನಾಕೃತಿಯ ಗೂಡುಗಳಿವೆ. ಕೋಟೆಯ ಒಳಭಾಗದ ಬಾಗಿಲಲ್ಲಿ ಎರಡು ಇಕ್ಕೆಲಗಳಲ್ಲಿರುವ ಮೆಟ್ಟಿಲುಗಳ ಮೂಲಕ ಕೋಟೆಯ ಮೇಲೆ ಹತ್ತಲು ಅನುಕೂಲವಿದೆ. ದಕ್ಷಿಣ ಗೋಡೆಯ ಮಧ್ಯದಲ್ಲಿರುವ ದಿಡ್ಡಿಯ ಚೌಕಟ್ಟಿನ ಕೆಳಗೆ ಉತ್ತರರಂಗದ ಮಧ್ಯದಲ್ಲಿ ಮತ್ತು ತುದಿಗಳಲ್ಲಿ ಚೌಕಾಕಾರದ ಪುಷ್ಪ ವಿನ್ಯಾಸವಿದೆ. ಬಾಗಿಲ ಮೇಲ್ಭಾಗದಲ್ಲಿಯ ಮತ್ತೊಂದು ಉತ್ತರರಂಗದ ಮಧ್ಯದಲ್ಲಿ ವೃತ್ತಾಕಾರದ ಪುಷ್ಪದ ಶಿಲ್ಪಗಳಿವೆ. ಇದರ ಬಲಭಾಗದ ಗೋಡೆಯಲ್ಲಿ ಸ್ತ್ರೀಯೊಬ್ಬಳಿಂದ ಹೆರಿಗೆ ಮಾಡಿಸಿಕೊಳ್ಳುವಂತೆ ಬಾಸವಾಗುವ ಉಬ್ಬು ಶಿಲ್ಪವಿದೆ. ಸ್ತ್ರೀ ಕಾಲು ಅಗಲಿಸಿ ವೀರಾಸನದಲ್ಲಿ ಕುಳಿತುಕೊಳ್ಳುವ ದೃಶ್ಯ ಇದರ ಇಕ್ಕೆಲಗಳಲ್ಲಿ ಸ್ತ್ರೀಯರು ಮಧ್ಯದವಳ ಕೈಗಳನ್ನು ಹಿಡಿದುಕೊಂಡಿದ್ದಾರೆ. ಕೆಳಭಾಗದಲ್ಲಿ ಮಗುವೊಂದರ ಉಬ್ಬು ಶಿಲ್ಪವಿದೆ.

ಕೋಟೆಯೊಳಗಿನ ಕೃಷ್ಣಾನಗರದ ಜನತೆ ಸೊಂಡೂರು ನಗರಕ್ಕೆ ದಿನ ನಿತ್ಯದ ಕೆಲಸಕ್ಕೆ ಓಡಾಡಲು ಈ ದಾರಿಯನ್ನೇ ಹೆಚ್ಚಾಗಿ ಬಳಸುತ್ತಾರೆ. ಬಹುಶಃ ಅಂದು ಇದೇ ಉದ್ದೇಶಕ್ಕಾಗಿ ಈ ದಿಡ್ಡಿಯನ್ನು ಕಟ್ಟಿರಬಹುದು. ಶತ್ರುಗಳು ಮುಖ್ಯಬಾಗಿಲನ್ನು ಮುತ್ತಿದಾಗ ಈ ದಿಡ್ಡಿ ಬಾಗಿಲಿನ ಮೂಲಕ ಹೊರ ಬರುವ ವ್ಯವಸ್ಥೆಯನ್ನು ಕಲ್ಪಿಸಿರಬಹುದು.

ಕೋಟೆಯ ಗೋಡೆಯ ಮೇಲೆ ಸುತ್ತಲೂ ನಿರ್ಮಿಸಿರುವ ಒಟ್ಟು ೧೯ ಕೊತ್ತಲಗಳಿವೆ. ಈ ಕೊತ್ತಲಗಳ ಕೈಪಿಡಿ ಗೋಡೆಗಳಲ್ಲಿ ಬಂದೂಕು ಕಿಂಡಿಗಳು ಮತ್ತು ತೋಪಿಗಾಗಿ ಬಿಟ್ಟ ಸಂಧಿಗಳಿವೆ. ಕೋಟೆಯ ಕೈ ಪಿಡಿ ಗೋಡೆಯು ಅಗಲವಾಗಿದ್ದು ಹೊರ ಬದಿಗೆ ಇಳಿಜಾರಾಗಿದೆ. ಕೊತ್ತಲಗಳಲ್ಲಿ ಕಾವಲುಗಾರರಿಗಾಗಿ

ಮಾಡಿದ ಯು ಆಕಾರದ ಚಿಕ್ಕ ಕೋಷ್ಟಕಗಳಿವೆ. ಕೆಲವು L ಆಕಾರದಲ್ಲಿವೆ. ಪಶ್ಚಿಮ ದಿಕ್ಕಿನ ಕೋಟೆಯ ಮಧ್ಯದಲ್ಲಿಯ ಬುರುಜು ಬಹಳ ದೊಡ್ಡದಾಗಿವೆ. ಅದರ ಮೇಲೆ ಒಂದು ಬತೇರಿ ಮತ್ತು ಕೆಳ ಮಟ್ಟದಲ್ಲಿರುವ ಒಂದು ಕಟ್ಟಡ ಇವೆ. ಆಯುತಾಕಾರದ ಈ ಕಟ್ಟಡವನ್ನು ಅದಕ್ಕಿಂತ ದೊಡ್ಡದಾದ ತಗ್ಗಿನಲ್ಲಿ ಕಟ್ಟಿದೆ. ಕೆಳಗೆ ಇಳಿಯಲು ಎರಡು ಬದಿಗೆ ಮೆಟ್ಟಿಲುಗಳಿವೆ. ಎಂಟು ಕಂಬಗಳ ಕಟ್ಟಡದ ಮುಂಭಾಗದಲ್ಲಿ ಕಮಾನುಗಳಿವೆ. ಈಶಾನ್ಯ ದಿಕ್ಕಿನ ಬುರುಜಿನ ಹೋರಗೋಡೆಯ ಕಲ್ಲಿನ ಮೇಲೆ ಆಂಜನೇಯ ಶಿಲ್ಪವಿದೆ. ಕೋಟೆಯ ಮೇಲೆ ಓಡಾಡಲು ಅಗಲವಾದ ದಾರಿಯಿದೆ. ಕೋಟೆಯ ಗೋಡೆಯಲ್ಲಿ ಬಂದೂಕು ಕಿಂಡಿಗಳು ಮತ್ತು ತೋಪು ಸಂಧಿಗಳಿವೆ. ಕೋಟೆಯ ಮೇಲೆ ತೋಪುಗಳನ್ನು ಒಯ್ಯುವ ಸಲುವಾಗಿ ಕೋಟೆಯ ನೈರುತ್ಯ ಮೂಲೆಯಲ್ಲಿ ದೊಡ್ಡ ಇಳಿವೋರೆಯನ್ನು ನಿರ್ಮಿಸಿದೆ.

ಕೋಟೆಯ ಹೊರಮೈಗೆ ಮಧ್ಯಮ ಗಾತ್ರದ ಕಲ್ಲುಗಳನ್ನು ಬಳಸಲಾಗಿದೆ. ಕಲ್ಲುಗಳ ಮಧ್ಯದಲ್ಲಿ ಅಗಲವಾದ ಸಂಧಿಗಳ ಉಂಟಾಗದಂತೆ ಕಲ್ಲುಗಳ ಅಂಚುಗಳನ್ನು ಕೆತ್ತಿಜೋಡಿಸಲಾಗಿದೆ. ಆದರೂ ಸಂಧಿಗಳಲ್ಲಿ ಸುಣ್ಣದ ಗಾರೆಯನ್ನು ಉಪಯೋಗಿಸಲಾಗಿದೆ. ಬಹಳ ಅಗಲವಾದ ಕೋಟೆಯೊಳಮೈಗೆ ಚಿಕ್ಕ ಕಲ್ಲುಗಳನ್ನು ಬಳಸಲಾಗಿದೆ. ಕೋಟೆಯ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ಅಗಲವಾದ ಕೈ ಪಿಡಿ ಗೋಡೆಯಿದೆ ಎತ್ತರವಾದ ಈ ಕೈಪಿಡಿ ಗೋಡೆಯ ಮೇಲ್ಭಾಗ ಇಳಿಜಾರಾಗಿದೆ.

ಕೋಟೆಯ ಒಳಗೆ ನಾಲ್ಕು ಮೂಲೆಯಲ್ಲಿ ನಾಲ್ಕು ಆಯುತಾಕಾರದ ಇಟ್ಟಿಗೆ ಗಾರೆಯ ಕಟ್ಟಡಗಳು ಮತ್ತು ಪೂರ್ವ ದಿಕ್ಕಿನ ಬಾಗಿಲಿನ ಹತ್ತಿರ ಒಂದು ಬಾವಿ ಇದೆ. ಆಯುತಕಾರದ ಬಾವಿಗೆ ಎತ್ತರ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಪೂರ್ವ ಮತ್ತು ಪಶ್ಚಿಮ ಗೋಡೆಗಳಲ್ಲಿ ಪ್ರತಿಯೊಂದರಲ್ಲಿ ಮೂರು ಗೂಡುಗಳಿವೆ. ಆಗ್ನೇಯ ಮೂಲೆಯಲ್ಲಿರುವ ಕಟ್ಟಡದ ಮುಂಭಾಗದಲ್ಲಿ ಮೂರು ಬಾಗಿಲುಗಳಿವೆ. ಒಳಭಾಗದಲ್ಲಿ ೬x೨ ಕಂಬಗಳಿವೆ. ಮೇಲೆ ಕಮಾನುಗಳ ಮೇಲೆ ನಿಂತಿರುವ ಒಳಮಾಳಿಗೆ ಇದೆ. ನೈರುತ್ಯ ಮೂಲೆಯಲ್ಲಿಯ ಕಟ್ಟಡದ ಮುಂಭಾಗದಲ್ಲಿಯ ಆಯುತಕಾರದ ಚಿಕ್ಕ ಮೊಗಸಾಲೆಗೆ ಎರಡು ಬಾಗಿಲುಗಳಿವೆ. ಇಲ್ಲಿಂದ ಕಟ್ಟಡದ ಒಳಗೆ ಹೋಗಲು ಇನ್ನು ಎರಡು ಬಾಗಿಲುಗಳಿವೆ. ಕಟ್ಟಡದ ಒಳಗಡೆ ಒಂದೇ ಸಾಲಿನಲ್ಲಿ ಎಂಟು ಕಂಬಗಳಿವೆ. ಪಶ್ಚಿಮದ ಗೋಡೆಗಳಲ್ಲಿ ಎರಡು ಸಣ್ಣ ಕಿಟಕಿಗಳಿವೆ. ವಾಯುವ್ಯ ಮೂಲೆಯಲ್ಲಿಯ ಕಟ್ಟಡದ ಮುಂಭಾಗದಲ್ಲಿ ಮೂರುಬಾಗಿಲುಗಳು ಮತ್ತು ಎರಡು ಕಿಟಕಿಗಳಿವೆ. ಉತ್ತರ ದಕ್ಷಿಣ ಗೋಡೆಗಳಲ್ಲಿ ಒಂದೊಂದು ಕಿಟಕಿಗಳಿವೆ. ಒಳಗೆ ಒಂದೇ ಸಾಲಿನಲ್ಲಿ ಒಂಭತ್ತು ಕಂಬಗಳಿವೆ. ಮಾಳಿಗೆ ಗುಡಿಸಲು ಆಕಾರದಲ್ಲಿ ಎರಡೂ ಬದಿಗೆ ಇಳಿಜಾರಾಗಿದೆ. ಈಶಾನ್ಯ ಮೂಲೆಯಲ್ಲಿಯ ಕಟ್ಟಡದ ಮುಂಭಾಗದಲ್ಲಿ ಕಮಾನಿನ ಐದು ಬಾಗಿಲುಗಳಿವೆ. ಒಳಗೆ ೬x೨ ಕಂಬಗಳಿವೆ.

### ಮದ್ದಿನ ಮನೆ

ಕೋಟೆಯ ಒಳಗೆ ವಿವಿಧ ಭಾಗಗಳಲ್ಲಿ ನಾಲ್ಕು ಮದ್ದಿನ ಮನೆಗಳಿವೆ. ಇವುಗಳನ್ನು ಸ್ಥಳೀಯರು ಲದಾವಿಗಳೆಂದು ಕರೆಯುತ್ತಾರೆ. ಆಕಸ್ಮಿಕವಾಗಿ ಮದ್ದಿನ ಮನೆಗೆ ಬೆಂಕಿ ಬಿದ್ದರು ಹೆಚ್ಚು ಹಾನಿಯಾಗದಂತೆ

ಎಚ್ಚರವಹಿಸಿ ಇವುಗಳ ವಾಸ್ತುವನ್ನು ರಚಿಸಲಾಗಿದೆ. ಈ ಮದ್ದಿನ ಮನೆಗಳಿಗೆ ಸಣ್ಣ ಸಣ್ಣ ಕಮಾನು ಆಕಾರದ ಬಾಗಿಲುಗಳನ್ನು ಹಾಗೂ ಕಿರಿದಾದ ಕಿಟಕಿಗಳನ್ನು ಜೋಡಿಸಲಾಗಿದೆ. ಮೇಲಿನ ಛಾವಣಿಯ ನಾಲ್ಕು ಬದಿಗಳು ಇಳಿಜಾರಾಗಿದೆ. ಇವುಗಳ ಮಾಳಿಗೆಗಳು ಗುಡಿಸಲು ಆಕಾರದಲ್ಲಿದೆ.

ಆಗ್ನೇಯ ಮೂಲೆಯಲ್ಲಿರುವ ಮದ್ದಿನ ಮನೆಯು ಉತ್ತರಾಭಿಮುಖವಾಗಿದೆ. ಇದು ಪೂರ್ವ ಪಶ್ಚಿಮವಾಗಿ ೨೦ ಅಡಿ ಉದ್ದ ಹಾಗೂ ಉತ್ತರ ದಕ್ಷಿಣವಾಗಿ ಸುಮಾರು ೩೦ ಅಡಿ ಅಗಲವಾಗಿದೆ. ಉತ್ತರದ ಗೋಡೆಯ ಮಧ್ಯದಲ್ಲಿ ಕಿರಿದಾದ ಕಮಾನಿನಾಕಾರದಲ್ಲಿದ್ದು ಇವುಗಳ ಮೇಲೆ ಒಳಮಾಳಿಗೆ ನಿಂತಿದೆ. ನೈರುತ್ಯ ಮೂಲೆಯಲ್ಲಿಯ ಮದ್ದಿನ ಮನೆಯು ಉತ್ತರಾಭಿಮುಖವಾಗಿದೆ. ಇದರೊಳಗೆ ಎಂಟು ಕಂಬಗಳಿವೆ. ಪಶ್ಚಿಮ ದಿಕ್ಕಿನ ಗೋಡೆಯಲ್ಲಿ ಎರಡು ಚಿಕ್ಕ ಕಿಟಕಿಗಳಿವೆ. ಇದು ಆಗ್ನೇಯಕ್ಕಿರುವ ಮದ್ದಿನ ಮನೆಗಿಂತ ಚಿಕ್ಕದಾಗಿದೆ. ವಾಯುವ್ಯ ದಿಕ್ಕಿನಲ್ಲಿರುವ ಮದ್ದಿನ ಮನೆಯು ಪೂರ್ವಾಭಿಮುಖವಾಗಿದ್ದು ಇದು ಉತ್ತರ ದಕ್ಷಿಣವಾಗಿ ಸುಮಾರು ೬೦ ಅಡಿ ಉದ್ದ ಹಾಗೂ ಪೂರ್ವ ಪಶ್ಚಿಮವಾಗಿ ೩೦ ಅಡಿ ಉದ್ದ ಹಾಗೂ ಪೂರ್ವ ಪಶ್ಚಿಮವಾಗಿ ೩೦ ಅಡಿ ಅಗಲವಾಗಿದೆ. ಇದರ ಪೂರ್ವದ ಗೋಡೆಯಲ್ಲಿ ಕಿರಿದಾದ ಕಮಾನಿನಾಕಾರದ ಮೂರು ಬಾಗಿಲುಗಳಿವೆ. ನಾಲ್ಕು ದಿಕ್ಕಿಗೂ ಸಣ್ಣ ಸಣ್ಣ ಕಿಟಕಿಗಳಿವೆ. ಒಳಗೆ ಒಂದೇ ಸಾಲಿನಲ್ಲಿ ಒಂಭತ್ತು ಕಂಬಗಳಿವೆ. ಈಶಾನ್ಯ ದಿಕ್ಕಿಗಿರುವ ಮದ್ದಿನ ಮನೆಯು ದಕ್ಷಿಣಾಭಿಮುಖವಾಗಿ ಸುಮಾರು ೩೦ ಅಡಿ ಅಗಲವಾಗಿದೆ.

ಮುಂಭಾಗದಲ್ಲಿ ಕಮಾನಿನಾಕಾರದ ಐದು ಬಾಗಿಲುಗಳಿವೆ. ಒಳಭಾಗದಲ್ಲಿ ಎರಡು ಸಾಲುಗಳಲ್ಲಿ ಒಟ್ಟು ೧೨ ಕಂಬಗಳಿವೆ ಈ ಕಟ್ಟಡಗಳನ್ನು ಬಾಡಿಗೆ ಆಧಾರದ ಮೇಲೆ ಸಾರ್ವಜನಿಕರಿಗೆ ನೀಡಲಾಗುತ್ತಿದೆ. ಇದರಲ್ಲಿ ಧವಸ ಧಾನ್ಯಗಳನ್ನು ಹಾಕುವುದಕ್ಕಾಗಿ ದನಕರುಗಳನ್ನು ಕಟ್ಟುವುದಕ್ಕಾಗಿ ಮತ್ತು ಮೇವುಗಳನ್ನು ಇಡುವುದಕ್ಕಾಗಿ ಬಳಸಲಾಗುತ್ತಿದೆ. ಕೋಟೆಯೊಳಗೆ ಕೃಷ್ಣಾನಗರವಿದೆ. ಈ ನಗರದಲ್ಲಿ ರಾಮಸ್ವಾಮಿ, ಈಶ್ವರ, ಊರಮ್ಮ, ತಾಯಮ್ಮನ ದೇವಾಲಯಗಳು, ದರ್ಗಾಗಳು ಹಾಗೂ ಮಸೀಧಿಗಳು ಇವೆ. ಕೋಟೆಯ ಪೂರ್ವ ದಿಕ್ಕಿನ ಬಾಗಿಲಿನ ಹತ್ತಿರ ಆಯುತಾಕಾರದ ಬಾವಿ ಇದೆ. ಇದಕ್ಕೆ ಉತ್ತರ ದಿಕ್ಕಿನಲ್ಲಿ ಪ್ರವೇಶ ಮಾಡಲು ಮೆಟ್ಟಿಲುಗಳಿವೆ.

ಇದರ ಸಮಕಾಲಿನ ಕೋಟೆಗಳಾದ ಶ್ರೀರಂಗಪಟ್ಟಣ, ಮಂಜರಾಬಾದ್, ಚೆನ್ನರಾಯದುರ್ಗಾ, ದೇವನ ಹಳ್ಳಿ, ಮುಖ್ಯವಾಗಿವೆ. ಇವುಗಳ ಬಹುತೇಕ ಲಕ್ಷಣಗಳನ್ನು ಕೃಷ್ಣಾನಗರದ ಕೋಟೆಯಲ್ಲಿ ಕಾಣಬಹುದಾಗಿದೆ.

### ಘೋರ್ಪಡೆ ವಂಶದವರ ಹೆಸರಿನಲ್ಲಿರುವ ಗ್ರಾಮುಗಳು

ಸೃಷ್ಟಿಯ ಪ್ರತಿಯೊಂದು ವಸ್ತುವಿಗೆ ಒಂದು ಇತಿಹಾಸವಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ ಸ್ಥಳಕ್ಕೂ ಊರಿಗೂ ಒಂದು ಚರಿತ್ರೆ ಇರುತ್ತದೆ. ಈ ಹೆಸರುಗಳೊಂದಿಗೆ ವ್ಯಕ್ತಿ ಸ್ಥಳಗಳ ಉಸಿರಲ್ಲಿ ಬಸಿರಲ್ಲಿ ಆತ್ಮ ಚರಿತ್ರೆ ಇರುತ್ತದೆ. ಅಂತಹ ಚರಿತ್ರೆಗಳನ್ನು ಸಂಗ್ರಹಿಸುವಲ್ಲಿ ಶಾಸನಗಳಿಗೆ ಮುಖ್ಯಸ್ಥಾನವಿದೆ.

ಪ್ರಸ್ತುತ ಚರಿತ್ರೆಯನ್ನು ಹಲವು ಮುಖಗಳಲ್ಲಿ ಅಧ್ಯಯನ ಮಾಡಬಹುದು. ಕೇವಲ ಶಾಸನ, ಕೋಟೆ, ಅರಮನೆ, ನಾಣ್ಯಗಳು ದೇವಾಲಯ ಮುಂತಾದ ಐತಿಹಾಸಿಕ ಆಧಾರಗಳಲ್ಲದೆ. ಒಂದು ಊರಿನ ಹೆಸರಿನಲ್ಲಿ ಕೂಡ ಚರಿತ್ರೆ ಅಡಗಿರುತ್ತದೆ. ಇಂತಹ ಚರಿತ್ರೆಯನ್ನು ಸಂಶೋಧನೆ ಮಾಡುವುದು ಸಂಶೋಧಕನ ಪ್ರಮುಖ ಕರ್ತವ್ಯವಾಗಿದೆ.

ಸ್ಥಳನಾಮಗಳು ಅಥವಾ ಗ್ರಾಮನಾಮಗಳು ಸಂಸ್ಕೃತಿಯ ಅಧ್ಯಯನ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಅದರಲ್ಲಿಯೂ ಸಮುದಾಯಗಳ ಜೀವನ ಇತಿಹಾಸವು ಪ್ರಾದೇಶಿಕ ನೆಲೆಯಲ್ಲಿ ಒಂದು ಜೀವನ ವಿಧಾನದ ಅನಾವರಣಕ್ಕೆ ಗ್ರಾಮಗಳು ಅವುಗಳ ಹೆಸರು ಕುತೂಹಲಕರವಾಗಿರುತ್ತದೆ. ಅನೇಕರಿಗೆ ಅವರು ವಾಸಿಸುವ ಊರುಗಳ ಬಗ್ಗೆ ಏನೆಂದು ತಿಳಿದಿರುವುದಿಲ್ಲ. ಒಬ್ಬ ವ್ಯಕ್ತಿ, ಸಮಾಜ ತನ್ನ ಇರುವನ್ನು ಗುರುತಿಸಿಕೊಳ್ಳಲು ಗ್ರಾಮಗಳ ಹೆಸರಿನ ಬಗೆಗೆ ತಿಳಿದಿರಬೇಕಾಗುತ್ತದೆ. ಒಂದೊಂದು ಊರಿನ ಹೆಸರೂ ಒಂದೊಂದು ಕುತೂಹಲಕರವಾದಂತಹ ಅಂಶವನ್ನು ಹೇಳುತ್ತಿರುತ್ತವೆ. ಹೆಚ್ಚಾಗಿ ಗ್ರಾಮೀಣರ ಬಾಯಿಯಲ್ಲಿ ಪುರಾಣೀ ಕೃತಗೊಂಡಿರುತ್ತವೆ. ಅಕ್ಷರಸ್ಥರಾದ ವೈದಿಕರಲ್ಲಿ ಸಂಸ್ಕೃತಾನುಕರಣಗೊಂಡಿರುತ್ತವೆ.

ಸ್ಥಳನಾಮಗಳು ಮುಖ್ಯವಾಗಿ ಐದು ಹಂತದಲ್ಲಿ ಹೆಸರಿಸಲ್ಪಟ್ಟಿರುತ್ತವೆ.

೧. ನಿಸರ್ಗವಾಚಿ ೨. ನಿರ್ಮಾಣವಾಚಿ

೩. ಜನಾಂಗವಾಚಿ ೪. ವ್ಯಕ್ತಿವಾಚಿ

೫. ಆದರ್ಶವಾಚಿ[೨೬]

ಆರಂಭಿಕ ಸ್ಥಳನಾಮಗಳೂ ನಿಸರ್ಗವಾಚಿಯಿಂದ ಕೂಡಿರುತ್ತವೆ. ಇದು ಸಾಮಾನ್ಯವಾಗಿ ಪ್ರಾಚೀನ ಊರುಗಳು ನಂತರ ಸಮುದಾಯದಿಂದ ವಿಕಾಸ ಹೊಂದಿರುತ್ತವೆ. ಇಲ್ಲಿ ಸಂಡೂರು ತಾಲ್ಲೂಕಿನ ೯೦ ಗ್ರಾಮ ನಾಮಗಳಿಂದ ಸ್ಥಳನಾಮಗಳ ವಿವಿಧ ಆಯಾಮವನ್ನು ಗುರುತಿಸಬಹುದು.[೨೭]

ಈ ಸೊಂಡೂರು ಸಂಸ್ಥಾನದಲ್ಲಿ ಗ್ರಾಮಗಳನ್ನು ವಸ್ತುನಿಷ್ಠವಾಗಿ ಸಂಶೋಧಿಸಿದರೆ ಆ ಗ್ರಾಮಗಳ ಪುನರ್ ನಾಮಕರಣದ ವೈಶಿಷ್ಟ್ಯಗಳು ತಿಳಿದು ಬರುತ್ತದೆ. ಸಂಸ್ಥಾನಿಕರು ತಮ್ಮ ವಂಶಸ್ಥರ ನೆನಪಿಗಾಗಿ ಇಲ್ಲವೇ ಕುಟುಂಬದವರ ನೆನಪಿಗಾಗಿ ಮೂಲ ಗ್ರಾಮದ ಹೆಸರುಗಳನ್ನು ಬದಲಾವಣೆ ಮಾಡಿ ಅಧಿಪತ್ಯ ಸ್ಥಾಪಿಸುತ್ತಿದ್ದರು. ಇದು ಜನತೆಗೆ ಒಪ್ಪಿಗೆಯಿರಲಿ ಒಪ್ಪಿಗೆಯಾಗದೆ ಇರಲಿ ಕಡ್ಡಾಯವಾಗಿತ್ತು. ಸೊಂಡೂರು ತಾಲ್ಲೂಕಿನಲ್ಲಾದ ರಾಜ ಪ್ರಭುತ್ವದ ಕೆಲವು ಪ್ರತಿನಾಮಕರಣ ಹೀಗಿವೆ.[೨೮]

| ಮೂಲ ಸ್ಥಳಗಳು | | ಬದಲಾವಣೆಗೊಂಡ ರೂಪಗಳು |
|---|---|---|
| ಕಣವಿಹಳ್ಳಿ | - | ಯಶವಂತನಗರ |
| ಕ್ಯಾನಾಪುರ | - | ದೌಲತಪುರ |
| ಎತ್ತಿನಹಟ್ಟಿ | - | ತಾರನಗರ |
| ಚಿಕ್ಕ ಸೊಂಡೂರು | - | ಲಕ್ಷ್ಮೀಪುರ |

| | | |
|---|---|---|
| ನವಲಹಟ್ಟಿ | - | ವಿಠಲ್‌ಪುರ |
| ನರಸಾಪುರ | - | ನರಸಿಂಗಾಪುರ |
| ಬಾವಿಹಳ್ಳಿ | - | ಸುಶೀಲಾನಗರ |
| ಮುದುಕಲ ಪಂಟೆ | - | ರಣಜೀತ್‌ಪುರ |
| ಹೊಸಹಳ್ಳಿ | - | ಭುಜಂಗ ನಗರ |

ಸ್ಥಳನಾಮಗಳ ಮೇಲೆ ರಾಜ ಪ್ರಭುತ್ವದ ಪ್ರತಿನಾಮಕರಣ ಪದ್ಧತಿಯನ್ನು ಮುಂದುವರೆಸಿರುವುದು ಸೊಂಡೂರು ತಾಲ್ಲೂಕಿನಲ್ಲಿ ಕಂಡು ಬರುತ್ತವೆ.

ಘೋರ್ಪಡೆ ರಾಜ ಮನೆತನದ ಆಡಳಿತ ಕಾಲಕ್ಕೆ ಈ ಎಲ್ಲಾ ಕ್ಷೇತ್ರಗಳನ್ನು ರಕ್ಷಿಸಿ ಬೆಳೆಸಿದರಲ್ಲದೆ ಅನೇಕ ಗ್ರಾಮಗಳನ್ನು ಕಟ್ಟಿದ್ದಾರೆ.[೨೯]

ಹೀಗೆ ನಾನಾ ಸಂದರ್ಭಗಳಲ್ಲಿ ರಾಜಮನೆತನದವರು ತಮ್ಮ ಕುಟುಂಬದ ಸದಸ್ಯರ ಹೆಸರುಗಳನ್ನು ಪ್ರತಿನಾಮಕರಣ ಮಾಡಿದ್ದಾರೆ. ಈಗ ಈ ಹೊಸಹೆಸರುಗಳೇ ಖಾಯಂ ಆಗಿವೆ. ಸ್ವಾಮಿ ಮಲೈ, ರಾಮನ ಮಲೈ, ಗಡ, ಘಟ್ಟ ಮುಂತಾದ ಪರ್ವತ ಪ್ರದೇಶ ಇಲ್ಲಿ ಅನ್ವರ್ಥವಾಗಿವೆ. ಹವಿನ ಮಡುಗು ಹಾವುಗಳ ಮಡುವಾಗಿರಬಹುದು ಘೋರ್ಪಡೆಯವರ ಮನೆಮಾತು ಮರಾಠಿ ಆಗಿದೆ. ಅಲ್ಲದೆ ಅವರ ಸೇವೆಗೆಂದು ಮಹಾರಾಷ್ಟ್ರ ಮುಂತಾದ ಕಡೆಯಿಂದ ಬ್ರಾಹ್ಮಣರು, ಮುಸಲ್ಮಾನರು ಬಂದು ನೆಲೆಸಿದ್ದಾರೆ. ಅವರವರಿಗೆ ಸರಿಯೆನಿಸಿದ ಹೊಸ ಹೆಸರಿನ ನೆಲೆಗಳು ಪ್ರಚಲಿತವಾಗಿದೆ.[೩೦]

ಈ ರೀತಿಯಲ್ಲಿ ಊರುಗಳಿಗೆ ಹೆಸರುಗಳು ಬದಲಾವಣೆ ಆಗುವುದರಿಂದ ಅಥವಾ ಮಾಡುವುದರಿಂದ ಆಯಾ ಊರಿನ ಸಾಂಸ್ಕೃತಿಕ ಪಲ್ಲಟವಾಗುತ್ತದೆ. ಜೊತೆಗೆ ಆ ಊರಿನ ಐತಿಹಾಸಿಕ ಹಿನ್ನೆಲೆಯನ್ನು ಕೂಡ ನಾವು ಮರೆಯಬಹುದು.

ಸೊಂಡೂರು ಭಾಗದ ಒಂದೊಂದು ಹಳ್ಳಿಗಳಿಗೆ ರಾಜ ಮನೆತನದವರ ಹೆಸರು ಇಡಲಾಗಿದೆ. ಈ ರೀತಿ ಅರಸು ಮನೆತನದ ನೆನಪು ಉಳಿದಿದೆ. ವ್ಯಂಗ್ಯವೆಂದರೆ ಕೆಲ ಹಳ್ಳಿಗಳು ರಾಜರ ಹೆಸರನ್ನಿಟ್ಟುಕೊಂಡು ದಾರಿದ್ರ್ಯ ಬಡತನದಿಂದ ನರಳುತ್ತಿವೆ.

## ಕೊನೆ ಟಿಪ್ಪಣಿ

೦೧. ಸಂಸ್ಥಾನಿಕರ ಐತಿಹಾಸಿಕ ಸಾಹಿತ್ಯ, ಮೆಳವಂಕಿ ಕೆ.ಆರ್, ಪುಟ-೧೬೧

೦೨. ಕಡಬಡಿ ಬಿ.ಕೆ., ವಡ್ಡಾರಾಧನೆ : ಒಂದು ಅಧ್ಯಯನ, ಪುಟ-೧೫೭, ೧೫೮

೦೩. ಪೂರ್ವೋಕ್ತ, ಮೆಳವಂಕಿ ಕೆ.ಆರ್, ಪುಟ-೧೬೯

೦೪. ಕೆಲ್ಬಲ್ ಜೆ., ಮದ್ರಾಸ್ ಜಿಲ್ಲಾ, ಗೆಜೆಟಿಯರ್, ಸಂಪುಟ-೫, ಪು-೩೧೯

೦೫. ಅದೇ, ಪುಟ-೩೧೯

೦೬. ಅದೇ, ಪುಟ-೩೧೯

೦೭. ಅದೇ, ಪುಟ-೩೧೯

೦೮. ಅದೇ, ಪುಟ-೩೧೯

೦೯. ಅದೇ, ಪುಟ-೩೧೯

೧೦. ಪೂರ್ವೋಕ್ತ, ಮೆಳವಂಕ್ತಿ ಕೆ.ಆರ್, ಪುಟ-೧೧೮

೧೧. ಪೂರ್ವೋಕ್ತ, ಕೆಲ್ಬಲ್ ಜೆ., ಪುಟ-೩೧೯

೧೨. ಅದೇ, ಪುಟ-೩೨೦

೧೩. ಅದೇ, ಪುಟ-೩೨೦

೧೪. ಅದೇ, ಪುಟ-೩೨೦

೧೫. ಅದೇ, ಪುಟ-೩೨೦

೧೬. ಸೊಂಡೂರು, ಭೂ ಹೋರಾಟ, ಅರುಣ ಜೋಳದ ಕೂಡ್ಲಿಗಿ, ಪುಟ-೩೮

೧೭. ಪೂರ್ವೋಕ್ತ, ಕೆಲ್ಬಲ್ ಜೆ., ಪುಟ-೩೧೯

೧೮. ಅದೇ, ಪುಟ-೩೧೯

೧೯. ಅದೇ, ಪುಟ-೩೧೬

೨೦. ಸೊಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ, ಡಾ.ಗಿರಿಜಾ, ಪುಟ-೧೭೮

೨೧. ಅದೇ, ಪುಟ-೧೭೮

೨೨. ಬಳ್ಳಾರಿ ಜಿಲ್ಲೆಯಕೋಟೆಗಳು, ಡಾ.ಎಂ.ಕೊಟ್ರೇಶ್, ಪುಟ-೭೯

೨೩. ಅದೇ, ಪುಟ-೭೯

೨೪. ಪೂರ್ವೋಕ್ತ, ಡಾ.ಗಿರಿಜಾ, ಪುಟ-೨೧೩

೨೫. ಅದೇ, ಪುಟ-೨೧೩

೨೬. ಲೊಹಾದ್ರಿ ಮಡಿಲು, ಸ್ಮರಣ ಸಂಚಿಕೆ, ಸೊಂಡೂರು ತಾಲ್ಲೂಕಿನ ಸ್ಥಳನಾಮಗಳು, ಜಾಜಿ ದೇವೆಂದ್ರಪ್ಪ ಯಳ್ಳಾಲೆ, ಪುಟ-೧೭೮

೨೭. ಅದೇ, ಪುಟ-೨೬

೨೮. ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು, ಗುರುಮೂರ್ತಿ, ಪೆಂಡಕೂರ್, ಪುಟ-೧೦

೨೯. ಪೂರ್ವೋಕ್ತ, ಜಾಜಿ ದೇವೆಂದ್ರಪ್ಪಯಳ್ಳಾರ್ತಿ, ಪುಟ-೨೮

೩೦. ಪೂರ್ವೋಕ್ತ, ಗುರುಮೂರ್ತಿ ಪೆಂಡಕೂರ್, ಪುಟ-೧೦

೩೧. ಅದೇ, ಪುಟ-೧೦

ಅಧ್ಯಾಯ - ಆರು

# ಸಮಾರೋಪ

ಇತಿಹಾಸ ರಚನೆಯಲ್ಲಿ ಸ್ಥಳೀಯ ಚರಿತ್ರೆಯು ಬಹಳ ಮುಖ್ಯಪಾತ್ರ ವಹಿಸುತ್ತದೆ. ಇತ್ತೀಚಿನ ದಿನಗಳಲ್ಲಿ ಸ್ಥಳಿಯ ಚರಿತ್ರೆಯ ಅಧ್ಯಯನ ಹೆಚ್ಚು ಮಹತ್ವವನ್ನು ಪಡೆದಿದೆ. ಈ ನಿಟ್ಟಿನಲ್ಲಿ ಸೊಂಡೂರು ಸಂಸ್ಥಾನಿಕರು : ಚಾರಿತ್ರಿಕ ಅಧ್ಯಯನ ಎಂಬ ಎಂ.ಫಿಲ್ ಸಂಪ್ರಬಂಧದಲ್ಲಿ ಸಂಶೋಧನಾತ್ಮಕ ಹಲವು ಅಂಶಗಳನ್ನು ಕ್ಷೇತ್ರಕಾರ್ಯದ ಮೂಲಕ ಸ್ಥಳ ಪರಿಶೀಲನೆ ಮಾಡಲಾಗಿದೆ. ಹಾಗೆಯೇ ಸಾಹಿತ್ಯ ಕೃತಿಗಳು, ಗೆಝೆಟಿಯರ್‌ಗಳು, ವಿಶೇಷ ಸಂಪುಟಗಳು, ಲೇಖನಗಳು ಮತ್ತು ಸ್ಮರಣ ಸಂಚಿಕೆಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ ಒಂದೆಡೆ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಕರ್ನಾಟಕವನ್ನು ಪ್ರಾಚೀನ ಕಾಲದಿಂದಲೂ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು ಹಾಗೂ ವಿಜಯನಗರದ ಅರಸ ಇತರ ಪ್ರಮುಖ ರಾಜ ಮನೆತನಗಳ ಜೊತೆಯಲ್ಲಿ ಹಲವಾರು ಸಣ್ಣ ಪುಟ್ಟ ರಾಜಮನೆತನಗಳು ರಾಜ್ಯಭಾರ ನಡೆಸಿವೆ. ಇದು ಕರ್ನಾಟಕದ ಸಂಸ್ಕೃತಿಯನ್ನು ಸಮೃದ್ಧಗೊಳಿಸುವಲ್ಲಿ ತಮ್ಮದೇ ಆದ ಪಾತ್ರವನ್ನು ನಿರ್ವಹಿಸಿದ್ದಾರೆ. ಬಳ್ಳಾರಿ ಜಿಲ್ಲೆ ಕರ್ನಾಟಕದ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಈ ಜಿಲ್ಲೆಯ ಭೌಗೋಳಿಕ ಪರಿಸರದಲ್ಲಿ ಶಿಲಾಯುಗದ ಕಾಲದಿಂದ ಪ್ರಸ್ತುತದವರೆಗೆ ಮಾನವ ಬದುಕಿದ ಕುರುಹುಗಳು, ಆಳ್ವಿಕೆ ನಡೆಸಿದ ವಿವಿಧ ಕಾಲಘಟ್ಟಗಳ ರಾಜಮನೆತನೆಗಳು ಕಂಡು ಬರುತ್ತದೆ. ಹಾಗೆಯೇ ನಡೆಸಿದ ವಿವಿಧ ಕಾಲಘಟ್ಟಗಳ ರಾಮನೆತನಗಳು ಕಂಡು ಬರುತ್ತದೆ. ಹಾಗೇಯೇ ಸೊಂಡೂರು ತಾಲ್ಲೂಕು ಚರಿತ್ರಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಚಕ್ರವರ್ತಿಗಳಿಗೆ ಸದಾ ಬೆಂಗಾವಲಾಗಿ ನಿಂತು ಅವರ ಆಡಳಿತದ ಸಾಮ್ರಾಜ್ಯದ ಏಳಿಗೆಗಾಗಿ ಸದಾಕಾಲ ಸಿದ್ಧರಾಗಿರುತ್ತಿದ್ದ ನಿಷ್ಠಾವಂತ ಸಂಸ್ಥಾನಿಕರುಗಳ ಪಾತ್ರ

ಬಹುಪ್ರಮುಖವಾದುದು. ಅಂತಹ ಸಂಸ್ಥಾನಿಕರಲ್ಲಿ ಸೊಂಡೂರು ಸಂಸ್ಥಾನಿಕರು ಕೂಡ ಒಂದು ಸಂಸ್ಥಾನವಾಗಿದೆ. ಈ ಸಂಸ್ಥಾನ ಕ್ರಿ.ಶ.೧೮ನೇ ಶತಮಾನದ ಆರಂಭದಿಂದ ೨೦ನೇ ಶತಮಾನದ ಮಧ್ಯಭಾಗವದವರೆಗೆ ಘೋರ್ಪಡೆ ವಂಶದವರಿಂದ ಆಳ್ವಿಕೆ ಕಂಡಿದೆ. ಅವರ ಅವಧಿಯಲ್ಲಿ ನಡೆದ ಕೆಲವು ಘಟನೆಗಳನ್ನು ಮುಂದಿನ ತಲೆಮಾರಿಗೆ ತಿಳಿಸುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

ಸಂಸ್ಥಾನಿಕರ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಮಗ್ರ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಈ ಅಧ್ಯಯನ ಉಪಯುಕ್ತ ಎಂದು ಭಾವಿಸಲಾಗಿದೆ.

ಕರ್ನಾಟಕವನ್ನಾಳಿದ ವಿವಿಧ ಅರಸು ಮನೆತನಗಳ ಅಭ್ಯುದಯಕ್ಕೆ ಆಡಳಿತದ ಸಮಗ್ರ ಕ್ಷೇತ್ರಗಳಿಗೆ ಸೊಂಡೂರು ಸಂಸ್ಥಾನಿಕರು ಕೊಡುಗೆ ನೀಡಿದ್ದಾರೆ. ಸಾಮ್ರಾಜ್ಯ ವಿಸ್ತಾರದಂತಹ ಕಾರ್ಯದಲ್ಲಿಯೂ ಭಾಗವಹಿಸಿರುವರು. ಸೊಂಡೂರು ಸಂಸ್ಥಾನಿಕರು. ಚಾರಿತ್ರಿಕ ಅಧ್ಯಯನ ಎಂಬ ಶೀರ್ಷಿಕೆಯ ಅಧ್ಯಯನದಲ್ಲಿ ಈ ಪ್ರದೇಶದ ವಿವಿಧ ಮುಖಗಳ ಪರಿಚಯವನ್ನು ಹಲವು ಅಧ್ಯಾಯಗಳಲ್ಲಿ ಮಾಡಿಕೊಡಲಾಗಿದೆ. ಅವುಗಳಲ್ಲಿ ಈ ತಾಲ್ಲೂಕಿನಲ್ಲಿ ಭೌಗೋಳಿಕ ಹಿನ್ನೆಲೆಯ ಭಾಗದಲ್ಲಿ ಇಲ್ಲಿಯ ಪರಿಸರದಲ್ಲಿ ದೊರೆಯುವ ಅರಣ್ಯ ಸಂಪತ್ತು, ಜಲ ಸಂಪತ್ತು, ಇಲ್ಲಿನ ಬೆಳೆಗಳು, ಪಶು, ಪಕ್ಷಿ ಮೊದಲಾದವುಗಳ ಮಹತ್ವವನ್ನು ಕಂಡುಕೊಳ್ಳಲಾಗಿದೆ.

ಈ ಪ್ರದೇಶವು ಐತಿಹಾಸಿಕ ಮಹತ್ವವನ್ನು ಅರಿಯುವಲ್ಲಿ ಮುಖ್ಯ ಪಾತ್ರ ವಹಿಸಿರುವ ಈ ಪ್ರದೇಶ ಪೂರ್ವ ಇತಿಹಾಸ ಭಾಗದಲ್ಲಿ ಈ ತಾಲ್ಲೂಕಿನ ದರೋಜಿ ಜೋಗ, ಕುರೆಕುಪ್ಪೆ, ರಾಜಾಪುರ, ತೋರಣಗಲ್ಲು ಇಂಗಳಗಿ ಲಕ್ಷ್ಮೀಪುರ ಈ ಸಂಸ್ಕೃತಿಯ ನೆಲೆಗಳಾಗಿದ್ದವು. ಈ ನೆಲೆಗಳ ಬಗ್ಗೆ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಮಧ್ಯಶಿಲಾಯುಗ, ತಾಮ್ರ ಶಿಲಾಯುಗ, ಬೃಹತ್ ಶಿಲಾಯುಗದ ಈ ಪರಿಸರದಲ್ಲಿ ಕಂಡುಬರುವ ಸಂಸ್ಕೃತಿ ಹಾಗೂ ಅವಶೇಷಗಳನ್ನು ಚರ್ಚಿಸಲಾಗಿದೆ. ಸೊಂಡೂರು ತಾಲ್ಲೂಕಿನಲ್ಲಿ ರಾಜಕೀಯವಾಗಿ ಆಡಳಿತ ನಡೆಸಿದ ಅನೇಕ ಮನೆತನಗಳು ಅಂದರೆ ಮೌರ್ಯರು, ನಂದರು, ಶಾತವಾಹನರು, ಕದಂಬರು, ಬಾದಾಮಿಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಕುರುಗೊಂಡಿನ ಸಿಂಧರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಮಧ್ಯಯುಗದಲ್ಲಿ ವಿಜಯನಗರ ಸಾಮ್ರಾಜ್ಯ, ಬೇಡನಾಯಕರುಗಳಾದ ಕುಮ್ಮಟದ ನಾಯಕರು, ಜರಿಮಲೆ ಪಾಳೆಯಗಾರರು ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಡಳಿತ ಹಾಗೂ ರಾಜಕೀಯ ಮತ್ತು ಆಡಳಿತಾತ್ಮಕ ಸಂಬಂಧವನ್ನು ಹಾಗೂ ಅವರುಗಳ ನೆಲೆಯನ್ನು ಕುರಿತು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಸೊಂಡೂರು ಸಂಸ್ಥಾನಿಕರ ಹುಟ್ಟು, ಬೆಳವಣಿಗೆ, ಬ್ರಿಟೀಷರ ಕಾಲದಲ್ಲಿ ಸಂಸ್ಥಾನದ ಸ್ಥಿತಿಗತಿಗಳು ಮೂಲ, ಹಾಗೂ ಪ್ರಮುಖ ಸಂಸ್ಥಾನಿಕರಾದ ಸಿದ್ದೋಜಿರಾವ್ ಘೋರ್ಪಡೆ ಮುರಾರಿರಾವ್ ಘೋರ್ಪಡೆ ಯಶವಂತರಾವ್ ಹಿಂದೂರಾವ್ ಘೋರ್ಪಡೆ ಅವರ ಆಳ್ವಿಕೆ ಯುದ್ಧಗಳು ಸಾಮ್ರಾಜ್ಯ ವಿಸ್ತಾರ ಹಾಗೂ ಅವರ ಕೊಡುಗೆಗಳನ್ನು ಮುಂತಾದ ವಿಷಯಗಳನ್ನು ವಿಶ್ಲೇಷಿಸಲಾಗಿದೆ.

ಸೊಂಡೂರು ಸಂಸ್ಥಾನಿಕರ ಕಾಲವು ಹಲವಾರುಗಳ ಸಂಬಂಧ ಹಾಗೂ ಹೋರಾಟಗಳಿಂದ ತುಂಬಿದ್ದು ಹೈದರಾಲಿ, ಟಿಪ್ಪುಸುಲ್ತಾನ್ ಮತ್ತು ಬ್ರಿಟಿಷರ ಜೊತೆ ಇರುವ ಸಂಬಂಧಗಳನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಸಂಸ್ಥಾನಿಕರು ಇವರ ಜೊತೆ ಮಾಡಿಕೊಂಡ ಒಪ್ಪಂದಗಳು, ಯುದ್ಧಗಳು, ಹಾಗೂ ಸಂಸ್ಥಾನದಲ್ಲಿ ಬ್ರಿಟೀಷರ ಆಡಳಿತ ನೀತಿಗಳನ್ನು ಚರ್ಚಿಸಲಾಗಿದೆ. ಸೊಂಡೂರು ಸಂಸ್ಥಾನದಲ್ಲಿ ಭಾರತ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನಡೆದ ಹೋರಾಟಗಳು ಹಾಗೂ ಭಾರತದ ಒಕ್ಕೂಟಕ್ಕೆ ಈ ಸಂಸ್ಥಾನ ಸೇರಿದ ಅಂಶಗಳು ಏಕೀಕರಣಗಳು ಮುಂತಾದ ವಿಷಯಗಳನ್ನು ವಿಶ್ಲೇಷಿಸಲಾಗಿದೆ. ಮೈಸೂರು ರಾಜ್ಯದಲ್ಲಿ ಸೊಂಡೂರು ಸಂಸ್ಥಾನಿಕರ ವಿಲೀನ ಹಾಗೂ ಸಂಸ್ಥಾನಿಕರ ಸಹಕಾರ ಹಾಗೂ ಬೆಂಬಲದ ಬಗ್ಗೆ ವಿವರಿಸಲಾಗಿದೆ.

ಸೊಂಡೂರು ಸಂಸ್ಥಾನಿಕರ ಆಳ್ವಿಕೆಯ ಸಂದರ್ಭದಲ್ಲಿ ಆ ಸಂಸ್ಥಾನದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ವ್ಯವಸ್ಥೆ, ಕುಟುಂಬ ಪದ್ಧತಿ, ಸ್ತ್ರೀಯರ ಸ್ಥಾನಮಾನಗಳು, ನಂಬಿಕೆಗಳು ಹಾಗೂ ಆರ್ಥಿಕ ವ್ಯವಸ್ಥೆಯಲ್ಲಿ ಭೂ ಸಂಪತ್ತು, ನೀರಾವರಿ ವ್ಯವಸ್ಥೆ, ಕಂದಾಯ ಪದ್ಧತಿ, ಶಿಕ್ಷಣ, ಆರೋಗ್ಯ, ವ್ಯವಸ್ಥೆ, ಭೂ ಕಂದಾಯ ಪೊಲೀಸ್ ವ್ಯವಸ್ಥೆ, ನ್ಯಾಯಾಂಗ ಪದ್ಧತಿಯನ್ನು, ವಿಶ್ಲೇಷಿಸಲಾಗಿದೆ.

ಅವರ ಕಾಲದಲ್ಲಿ ಕಂಡುಬರುವ ಬೆರಳಣಿಕೆಯಷ್ಟು ಕಲೆ ಮತ್ತು ವಾಸ್ತು ಶಿಲ್ಪವನ್ನು ಕಾಣಬಹುದು. ಬ್ರಿಟಿಷರ ಸಹಾಯದಿಂದ ಅರಮನೆಯನ್ನು ಹಾಗೂ ಹೈದರಾಲಿ ಮತ್ತು ಟಿಪ್ಪು ಕಟ್ಟಿಸಿದ ಕೃಷ್ಣಾನಗರ ಕೋಟೆ ಈ ಕಾಲದಲ್ಲಿ ಕಂಡು ಬರುವ ಪ್ರಮುಖ ಕಲೆ ಮತ್ತು ವಾಸ್ತುಶಿಲ್ಪ ಅದು ಅಲ್ಲದೆ ಅವರೆ ಸ್ವತಃ ಕೆಲವು ಸಣ್ಣಪುಟ್ಟ ದೇವಸ್ಥಾನಗಳು ಕಟ್ಟಿಸಿರುವುದು ಕಂಡು ಬರುತ್ತದೆ. ಜೊತೆಗೆ ಕುಮಾರ ಸ್ವಾಮಿ ದೇವಸ್ಥಾನಕ್ಕೆ ದತ್ತಿಕೊಟ್ಟಿರುವುದು ಮತ್ತು ಆ ದೇವಾಲಯವನ್ನು ಜೀರ್ಣೋದ್ಧಾರ ಮಾಡಿರುವುದು ಕಂಡು ಬರುತ್ತದೆ. ಸಂಸ್ಥಾನಿಕರ ಪ್ರಮುಖರ ಹೆಸರಿನಲ್ಲಿರುವ ಕೆಲವು ಗ್ರಾಮಗಳು ಇವತ್ತಿಗೂ ಕೊಡುಗೆ ಕಂಡು ಬರುತ್ತದೆ. ಇಂತಹ ಇವರ ವ್ಯವಸ್ಥೆಯ ಮೂಲಭೂತ ವಿಷಯಗಳ ಚರ್ಚೆಯನ್ನು ಇಲ್ಲಿ ಕಾಣಬಹುದು.

ಒಟ್ಟಾರೆಯಾಗಿ ಸೊಂಡೂರು ಸಂಸ್ಥಾನಿಕರು ಒಂದು ಚಾರಿತ್ರಿಕ ಅಧ್ಯಯನ ಎಂಬ ಅಧ್ಯಯನಕ್ಕೆ ಪ್ರಮುಖ ಆಕರಗಳನ್ನು ಬಳಸಿಕೊಂಡು ಸಂಸ್ಥಾನಿಕರ ಚರಿತ್ರೆಯನ್ನು ರಚಿಸಲಾಗಿದೆ. ಸಂಸ್ಥಾನದ ಹುಟ್ಟು ಬೆಳವಣಿಗೆ, ಮೂಲ ಪ್ರಮುಖ ಸಂಸ್ಥಾನಿಕರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಸೆಂಡೂರು ಸಂಸ್ಥಾನಿಕರ ಜೊತೆ ಬಾಹ್ಯರಾಜಕೀಯ ಶಕ್ತಿಗಳಾದ ಹೈದರಾಲಿ, ಟಿಪ್ಪುಸುಲ್ತಾನ್ ಹಾಗೂ ಬ್ರಿಟೀಷರ ಜೊತೆ ಇರುವ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸಂಬಂಧವನ್ನು ವಿವರಿಸಲಾಗಿದೆ.

ಒಟ್ಟಾರೆ ಸೊಂಡೂರು ಸಂಸ್ಥಾನಿಕರು ರಾಜ್ಯಳ್ವಿಕೆಯು ಹಲವಾರು ವೈವಿಧ್ಯತೆಯಿಂದ ಕೂಡಿದ್ದು ಇಲ್ಲಿ ಹಲವಾರು ವಿಷಯಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಕೆಲವು ಮಿತಿಗಳಿಗೊಳಪಟ್ಟು ಇತರ ಸಂಗತಿಗಳನ್ನು ಇಲ್ಲಿ ಕೈಬಿಡಲಾಗಿದೆ. ಅವು ಮುಂದಿನ ಅಧ್ಯಯನಗಳಿಗೆ ಆಸ್ಪದ ನೀಡುತ್ತವೆ.

---

# ಅನುಬಂಧಗಳು

೧. ಆಧಾರ ಗ್ರಂಥಗಳು
೨. ಸೋಂಡೂರು ಸಂಸ್ಥಾನಿಕರ ವಂಶಾವಳಿ
೩. ಸೋಂಡೂರು ಸಂಸ್ಥಾನಿಕರ ಆಳ್ವಿಕೆಯಲ್ಲಿ ಸಂಭವಿಸಿದ ಪ್ರಮುಖ ಘಟನೆಗಳು
೪. ನಕ್ಷೆಗಳು
೫. ಛಾಯಾಚಿತ್ರಗಳು

# ಆಧಾರ ಗ್ರಂಥಗಳು

೦೧. ಅರುಣ ಜೋಳದ ಕೂಡ್ಲಿಗಿ, ೨೦೦೭, ಸೊಂಡೂರು ಭೂ ಹೋರಾಟಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೨. ಕಲಬುರ್ಗಿ ಎಂ.ಎ., ೧೯೯೪, ಕರ್ನಾಟಕದ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೩. ಕೃಷ್ಣರಾವ್ ಎಂ.ವಿ., ೧೯೭೦, ಕರ್ನಾಟಕ ಇತಿಹಾಸದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು

೦೪. ಕೆಳದಿ ಗುಂಡಾ ಜೋಯಿಸ್, ೧೯೭೨, ಕೆಳದಿ ಸಂಸ್ಥಾನ, ಐ.ಬಿ.ಹೆಚ್, ಪ್ರಕಾಶನ, ಬೆಂಗಳೂರು

೦೫. ಕೊಟ್ರೇಶ್ ಎಂ., ೨೦೧೧, ಬಳ್ಳಾರಿ ಜಿಲ್ಲೆಯ ಕೋಟೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೬. ಕೇಶವರಾವ್ ಟಿ.ಬಿ, ೧೯೭೯, ಸ್ವಾತಂತ್ರ್ಯ ಸಂಗ್ರಾಮ ಬಳ್ಳಾರಿ, ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು

೦೭. ಗಿರಿಜಾ, ೨೦೧೧, ಸೊಂಡೂರು ತಾಲ್ಲೂಕು : ಒಂದು ಚಾರಿತ್ರಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೦೮. ಗುರುಮೂರ್ತಿ ಪೆಂಡಕೂರು, ೨೦೦೬, ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೦೯. ಗೋಪಾಲ್ ರಾವ್ ಹೆಚ್.ಎಸ್., ೧೯೯೬, ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ., ಬೆಂಗಳೂರು

೧೦. ಗೋಪಾಲ ಬಾ.ರಾ., ೧೯೮೦ ಕರ್ನಾಟಕ ಇತಿಹಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೧೧. ಗೋವಿಂದರಾಜು ಸಿ.ಆರ್., ೧೯೯೮, ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ, ಎಸ್.ಬಿ.ಎಸ್ ಪಬ್ಲಿಷರ್ಸ್, ಬೆಂಗಳೂರು

೧೨. ಚಂದ್ರಶೇಖರಯ್ಯ ಎಂ., ೧೯೮೭, ಕೂಡ್ಲಿಗಿ ತಾಲ್ಲೂಕು ದರ್ಶನ, ಐಬಿಹೆಚ್., ಪ್ರಕಾಶನ, ಬೆಂಗಳೂರು

೧೩. ಚಂದ್ರಶೇಖರ್ ಎಸ್., ವಸಾಹತುಕಾಲೀನ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೪. ಚಂದ್ರಶೇಖರ್ ಎಸ್. (ಸಂ)., ೧೯೯೭, ಕರ್ನಾಟಕ ಚರಿತ್ರೆ ಸಂಪುಟ-೧, (೧೯೦೦-೧೯೫೭),
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. ಚನ್ನಬಸಯ್ಯ ಹಿರೇಮಠ, ೧೯೯೫, ಕುರುಗೋಡು ಸಿಂಧರು : ಒಂದು ಅಧ್ಯಯನ, ಕರ್ನಾಟಕ
ವಿಶ್ವವಿದ್ಯಾಲಯ, ಧಾರವಾಡ

೧೬. ಜಾಜಿ ದೇವೆಂದ್ರಪ್ಪ, ೨೦೦೪, ಲೋಹಾದ್ರಿ ಮಡಿಲು ಸೊಂಡೂರು ತಾಲ್ಲೂಕು ಸ್ಥಳನಾಮಗಳು,
ಕನ್ನಡ ಸಾಹಿತ್ಯ ಪರಿಷತ್ತು, ಸೊಂಡೂರು

೧೭. ಜಗದೀಶ್ ಕೆರೆನಹಳ್ಳಿ (ಸಂ)., ೨೦೧೧, ಸ್ಕಂದ ಸಿರಿ, ಕನ್ನಡ ಸಾಹಿತ್ಯ ಪರಿಷತ್ತು, ಸೊಂಡೂರು

೧೮. ದಿವಾಕರ ರಂ.ರಾ., ೧೯೯೨, ಕರ್ನಾಟಕ ಏಕೀಕರಣ ಕಥೆ, ಲೋಕ ಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ

೧೯. ದೇ.ಜ.ಗೌ., ೧೯೯೦, ಸ್ಥಳನಾಮಗಳ ವ್ಯಾಸಂಗ, ಸಹ್ಯಾದ್ರಿ ಪ್ರಕಾಶನ,

೨೦. ದೇವರ ಕೊಂಡಾರೆಡ್ಡಿ, ಹಾಗೂ ಇತರರು (ಸಂ)., ೧೯೯೮, ಕನ್ನಡ ವಿಶ್ವವಿದ್ಯಾಲಯ ಶಾಸನ
ಸಂಪುಟ-೧, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ನರಸಿಂಹ ಮೂರ್ತಿ ಎ.ವಿ., ೧೯೭೧, ಕರ್ನಾಟಕ ಸೇವುಣರ ಇತಿಹಾಸ, ಕನ್ನಡ ಅಧ್ಯಯನ
ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨೨. ನಾಗಯ್ಯ ಜೆ.ಎಂ., ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ,
ಬಳ್ಳಾರಿ

೨೩. ನಾಗಯ್ಯ ಜೆ.ಎಂ., ನೆನಪಿನ ಸಂಚಿಕೆ, ಸೊಂಡೂರು ಕೆಲವು ಐತಿಹಾಸಿಕ ಘಟನೆಗಳು, ಪ್ರಭು
ಪ್ರಕಾಶನ,

೨೪. ನಾಗಭೂಷಣ, ೧೯೯೭, ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಮತ್ತು ಸಾಂಸ್ಕೃತಿಕ
ಪರಂಪರೆ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೨೫. ಪೂಜಾರ್ ಆರ್.ವಿ., ೧೯೩೭, ಸವಣೂರು ಸಂಸ್ಥಾನದ ಸಂಕ್ಷಿಪ್ತ ಇತಿಹಾಸ, ಸವಣೂರು
ಪ್ರೆಸ್, ಸವಣೂರು

೨೬. ಬಡಿಗೇರ ವಿರುಪಾಕ್ಷ ಬಿ., ೧೯೮೮, ಸಿರಸಂಗಿ ಸಂಸ್ಥಾನ : ಒಂದು ಅಧ್ಯಯನ, ವೀರಶೈವ
ಅಧ್ಯಯನ ಸಂಸ್ಥೆ, ಶ್ರೀಜಗದ್ಗುರು ಸಂಸ್ಥಾನ ಮಠ, ಡಂಬಳ

೨೭. ಬಸವರಾಜ ಸಬರದ (ಪ್ರ.ಸ)., ೨೦೦೫, ಬಳ್ಳಾರಿ ಜಿಲ್ಲೆಯ ದರ್ಶನ, ಪ್ರಸಾರಾಂಗ, ಗುಲ್ಬರ್ಗ
ವಿಶ್ವವಿದ್ಯಾಲಯ, ಗುಲ್ಬರ್ಗ

೨೮. ಭಾರತಿ ಕಾಸರಗೋಡು (ಅನು)., ೨೦೧೧, ಸಾಹಸದ ಒಂದು ಸಿಮಾರೇಖೆ, ಅಭಿನವ ಪ್ರಕಾಶನ,
ಬೆಂಗಳೂರು

೨೯. ಮಹದೇವ ಸಿ., ಮತ್ತು ಇತರರು, ೨೦೦೨, ಹೊಸಪೇಟೆ ತಾಲ್ಲೂಕು ದರ್ಶನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ಮೃತ್ಯುಂಜಯ ಹೊರಕೇರಿ (ಮು.ಸಂ)., ೧೯೯೧, 'ಸ್ಕಂದ ಶ್ರೀಗಂಧ' ಸ್ಮರಣಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಸೊಂಡೂರು

೩೧. ಯಜಮಾನ್ ಶಾಂತರುದ್ರಪ್ಪ, ೧೯೭೩, ಸೊಂಡೂರು ಹೋರಾಟ ಏಕೆ?, ಸಮಾಜವಾದಿ ಪಕ್ಷ, ಬೆಂಗಳೂರು

೩೨. ರವಿಕುಮಾರ್ ಎನ್.ಎಂ., ೧೯೯೮, ಮುನ್ನಡೆಯ ಕೂಡ್ಲಿಗಿ (ಕೂಡ್ಲಿಗಿ ತಾಲ್ಲೂಕಿನ ಸಮಗ್ರ ದರ್ಶನ), ಹಿಮಂತ ಪ್ರಕಾಶನ, ಎಂ.ಬಿ. ಅಯ್ಯನಹಳ್ಳಿ

೩೩. ರವೀಂದ್ರನಾಥ ಕೆ (ಸಂ)., ೨೦೦೫, ಬಳ್ಳಾರಿ ಜಿಲ್ಲಾದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೩೪. ರಾಮಪ್ರಸಾದ್ ಎನ್., ೧೯೮೫, ಕರ್ನಾಟಕದಲ್ಲಿ ರಾಜ್ಯಾಡಳಿತ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೩೫. ರವೀಂದ್ರನಾಥ ಕೆ., ೨೦೦೩, ಅಗ್ನಿದಿವ್ಯ, ಅಮರ ಪ್ರಕಾಶನ, ಗುಲ್ಬರ್ಗಾ

೩೬. ಲಕ್ಷ್ಮಣ ತೆಲಗಾವಿ, ೧೯೯೮, ಎಪ್ಪತ್ತೇಳು ಪಾಳೆಯಗಾರರು, ಇತಿಹಾಸ ದರ್ಶನ ಸಂಪುಟ-೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೩೭. ಲಕ್ಷ್ಮೀನಾರಾಯಣ ರಾಯರು ಎನ್., ೧೯೪೬, ಕರ್ನಾಟಕದ ಅರಸು ಮನೆತನಗಳು, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ, ಧಾರವಾಡ

೩೮. ವಾಸುದೇವ ಬಡಿಗೇರ, ೧೯೯೭, ಸೊಂಡೂರು ಪರಿಸರದ ಕಾರ್ತೀಕೆಯ ತಪೋವನ ಚಾರಿತ್ರಿಕ ಅಧ್ಯಯನ, ಮಯ ಪ್ರಕಾಶನ, ಕಮಲಾಪುರ

೩೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ವಸಾಹತು ಕಾಲಿನ ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೦. ವಿರುಪಾಕ್ಷಿ ಪೂಜಾರಹಳ್ಳಿ, ೧೯೯೫, ಬಳ್ಳಾರಿ ಜಿಲ್ಲೆಯ ಕಲೆಕ್ಟರ್‌ಗಳ ಆಳ್ವಿಕೆ (೧೮೦೦-೧೯೪೭) ಎಂ.ಫಿಲ್ ಪ್ರೌಢ ಪ್ರಬಂಧ (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೧. ವೃಷಭೇಂದ್ರಾಚಾರ್ ಎ., ೨೦೦೪, ಕಾರ್ತೀಕಾಯಣ, ಕುಮಾರ ಪ್ರಕಾಶನ, ಸಂಡೂರು

೪೨. ವೃಷಭೇಂದ್ರಾಚಾರ್ (ಪ್ರ.ಸಂ)., ೨೦೦೪, ಲೋಹಾದ್ರಿಯ ಮಡಿಲು ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತು, ಸೊಂಡೂರು

೪೩. ವೃಷಭೇಂದ್ರಾಚಾರ್, ೨೦೦೯, ವೀರರಾಣಿ ಕಿತ್ತೂರು ಚೆನ್ನಮ್ಮ, ರಾಜು ಪ್ರಕಾಶನ, ಮೈಸೂರು

೪೪. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೫. ಶೇಷಾದ್ರಿ ಬಿ (ಸಂ)., ೧೯೯೮, ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೬. ಷೇಕ್ ಅಲಿ ಬಿ (ಪ್ರ.ಸಂ)., ೨೦೦೫, ಕರ್ನಾಟಕ ಚರಿತ್ರೆ ಸಂಪುಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೭. ಸದಾಶಿವಪ್ಪ ಕುಂ.ಬಾ., ೧೯೯೭, ಹರಪನಹಳ್ಳಿಯ ಪಾಳೇಯಗಾರರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೮. ಸದಾಶಿವಪ್ಪ ಕುಂ.ಬಾ., ೧೯೯೦, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ದರ್ಶನ, ಮಾಲತೇಶ, ಪ್ರಕಾಶನ, ಕುಂಚೂರು

೪೯. ಸುರೇಶ್ ಕೆಂ.ಎಂ. ಮತ್ತು ಇತರರು, ೧೯೯೯, ಕರ್ನಾಟಕದ ದೇವಾಲಯ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲ, ಹಂಪಿ

೫೦. ಸೂರ್ಯನಾಥ ಯು.ಕಾಮತ್ (ಮು.ಸಂ)., ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಕರ್ನಾಟಕ ಸರಕಾರ, ಬೆಂಗಳೂರು

೫೧. ಹನುಮಂತ, ೧೯೮೧, ಸೊಂಡೂರು ಹೋರಾಟ, ಜನ ಪ್ರಕಾಶನ, ಬೆಂಗಳೂರು

## ಗ್ಯಾಸೆಟಿರ್‌ಗಳು

01. Franais W(Ed.,), 1904, Madras District qazetteer, Bellary District, Madras
02. Kelshall J., 1872, Madrass Destrict gazetteer, Bellary vol-v, Madras
03. Maclean C.D (Ed.,), 1987, Mannual of the administration, Madras, Presidency vol-1, Assian Education Service, New Delhi
04. Mysore State Gazetteer, Bellary District (1972) Government of Mysore, Bangalore
೦೫. ಸೂರ್ಯನಾಥ ಯು.ಕಾಮತ್ (ಮು.ಸಂ)., ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಕರ್ನಾಟಕ ಸರಕಾರ, ಬೆಂಗಳೂರು

## ಇಂಗ್ಲಿಷ್ ಗ್ರಂಥಗಳು

01. Ghorpade M.Y., 1992, The Ghorpade Registance, Murari Rao Ghorpade and 18th Century Deccan, Ravinayl, Bangalore.
02. Patil S.H., 1981, The Congress party and princly states, Himalaya publishing, Bombay

## ವಿಶ್ವಕೋಶ

೦೧. ಕನ್ನಡ ವಿಷಯ ವಿಶ್ವಕೋಶ, ೧೯೭೯, ಮೈಸೂರು ವಿಶ್ವವಿದ್ಯಾಲಯ, ಮೈಸೂರು

## ಅಪ್ರಕಟಿತ ಗ್ರಂಥಗಳು

೧. ಕರಿಬಸಪ್ಪ ಎಂ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨. ರಂಗರಾಜ ದೇವೆಂದ್ರಪ್ಪ, ೧೯೯೨, ಸುರಪುರದ ಸಂಸ್ಥಾನ : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ
೩. ವಿರುಪಾಕ್ಷಿ ಪೂಜಾರಹಳ್ಳಿ, ೧೯೯೫, ಬಳ್ಳಾರಿ ಜಿಲ್ಲೆಯ ಕಲೆಕ್ಟರುಗಳ ಆಳ್ವಿಕೆ (೧೮೦೦-೧೯೪೭), ಕನ್ನಡ ವಿಶ್ವವಿದ್ಯಾಲಯ, ಹಂಪಿ
೪. ಗಿರಿಜಾ, ಸೊಂಡೂರು ಪರಿಸರದ ಶಾಸನಗಳು ಮತ್ತು ಉಲ್ಲೇಖಿತ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಸೊಂಡೂರನ್ನು ಆಳಿದ ಘೋರ್ಪಡೆ ಮನೆತನದ ವಂಶಾವಳಿ



## ಸೊಂಡೂರು ಸಂಸ್ಥಾನಿಕರ ಆಳ್ವಿಕೆಯಲ್ಲಿ ಸಂಭವಿಸಿದ ಪ್ರಮುಖ ಘಟನೆಗಳು

೦೧. ೧೭೧೩ : ಸಿದ್ದೋಜಿರಾವ್ ಘೋರ್ಪಡೆ ಜರಿಮಲೆ ನಾಯಕನನ್ನು ಓಡಿಸಿ ಅಧಿಕಾರ ಸ್ಥಾಪಿಸಿದನು.

೦೨. ೧೭೧೩-೧೭೩೧ : ಸಿದ್ದೋಜಿರಾವ್ ಘೋರ್ಪಡೆ ಆಳ್ವಿಕೆ ಕಾಲ.

೦೩. ೧೭೨೮ : ಸಿದ್ದೋಜಿರಾವ್ ಪುನಃ ಜರಿಮಲೆ ಪಾಳೆಯಗಾರರಿಂದ ಗೆದ್ದುಕೊಂಡನು.

೦೪. ೧೭೩೧ : ಸಿದ್ದೋಜಿರಾವ್ ಮರಣ.

೦೫. ೧೭೩೧-೧೭೭೭ : ಮುರಾರಿರಾವ್ ಘೋರ್ಪಡೆ ಆಳ್ವಿಕೆ ಕಾಲ.

೦೬. ೧೯೪೧-೪೪ : ಮುರಾರಿರಾಯರು ತಿರುಚಿಯ ರಾಜಾ ಪ್ರತಿನಿದಿಯಾಗಿದ್ದ.

೦೭. ೧೭೪೩ : ನಿಜಾಂಉಲ್ ಮುಲ್ಕ್ ಮುರಾರಿರಾಯರಿಗೆ ಉಡುಗೋರೆ ನೀಡಿದ.

೦೮. ೧೭೪೯ : ಡಿಸೆಂಬರ್‌ನಲ್ಲಿ ಮುರಾರಿರಾವ್ ಗುತ್ತಿಯಿಂದ ಚಂದಾಸಾಹೇಬ್ ಮತ್ತು ಮುಜಫರ್ ಜಂಗ್‌ನೋಡನೆ ಯುದ್ಧ.

೧೨. ೧೭೫೦ : ಫ್ರೆಂಚರು ಜಿಂಜಿಯನ್ನು ಆಕ್ರಮಿಸಿದರು.

೧೩. ೧೭೫೩ : ಡೂಪ್ಲಿಕ್ಸ್ ಮುರಾರಿರಾಯನಿಗೆ ಭವ್ಯ ಸ್ವಾಗತವನ್ನು ಏರ್ಪಡಿಸಿದ.

೧೮. ೧೭೬೯ : ಅಕ್ಟೋಬರ್, ಹೈದರಾಲಿಯು ಮುರಾರಿರಾವ್‌ರವರ ಸ್ನೇಹವನ್ನು ಬಯಸಿ ಸಂದೇಶಕಳುಹಿಸಿದ

೨೨. ೧೭೭೫ : ಹೈದರಾಲಿ ಗುತ್ತಿಕೋಟೆಗೆ ಮುತ್ತಿಗೆ ಹಾಕಿದ.

೨೩. ೧೭೭೫-೭೬ : ಸೊಂಡೂರು ಹೈದರಾಲಿ ಆಳ್ವಿಕೆಗೆ ಒಳಪಟ್ಟಿತ್ತು.

೨೪. ೧೭೭೬ : ಮಾರ್ಚ್ ೧೫ ರಿಂದ ಹೈದರಾಲಿ ಗುತ್ತಿಯಲ್ಲಿ ನಿಧಿಯನ್ನು ಹುಡುಕಿದ.

೨೫. ೧೭೭೬ : ಕೃಷ್ಣನಗರ ಕೋಟೆ ನಿರ್ಮಾಣ ಕಾರ್ಯ ಆರಂಭ.

೨೬. ೧೭೭೭ : ಮುರಾರಿರಾವ್ ಕಬ್ಬಲದುರ್ಗದಲ್ಲಿ ಮರಣ.

೨೭. ೧೭೭೯ : ಶಿವರಾವ್ ಮರಣ.

೨೮. ೧೭೭೯ : ಹೈದರಾಲಿ ಗುತ್ತಿಕೋಟೆಯನ್ನು ಆಕ್ರಮಿಸಿದ.

೩೦. ೧೭೮೦ : ಹೈದರಾಲಿ ಸೊಂಡೂರನ್ನು ಗೆದ್ದುಕೊಂಡನು.

೩೪. ೧೭೮೫ : ಟಿಪ್ಪು ಸೊಂಡೂರಿಗೆ ಬಂದನು.

೩೫. ೧೭೮೫ : ೨ನೇ ಶಿವರಾವ್‌ನ ಮರಣ.

೩೯. ೧೭೯೨ : ಕೃಷ್ಣಾನಗರದ ಕೋಟೆ ನಿರ್ಮಾಣ ಪೂರ್ಣಗೊಳಿಸಿದರು.

೪೦. ೧೭೯೨ : ಒಪ್ಪಂದ ಪ್ರಕಾರ ಘೋರ್ಪಡೆ ವಂಶದವರಿಗೆ ಸೊಂಡೂರಿನ ಅಧಿಕಾರ ನೀಡಲಾಯಿತು.

೪೧. ೧೭೯೯ : ಟಿಪ್ಪು ಗುತ್ತಿಕೋಟೆಯನ್ನು ವಶಪಡಿಸಿಕೊಂಡ.

೪೨. ೧೮೧೭ : ಇಂಗ್ಲೀಷರ ಸಹಾಯದೊಂದಿಗೆ ಬಾಜಿರಾಯ ಸೊಂಡೂರಿನ ಮೇಲೆ ದಾಳಿ.

೪೬. ೧೮೪೦ : ೨ನೇ ಶಿವರಾಯನ ಮರಣ.

೪೮. ೧೮೬೧ : ವೆಂಕಟರಾಯ ಮರಣ.

೪೯. ೧೮೬೩ : ಶಿವಷಣ್ಮುಖರಾವ್ ಸನದನ್ನು ಪಡೆದ.

೫೦. ೧೮೭೬ : ಜನವರಿ ೨೪ರಂದು ಗವರ್ನರ್ ಜನರಲ್ ಲಾರ್ಡ್‌ನಾರ್ಥ್ ಬ್ರೂಕ್‌ನು ಶಿವಷಣ್ಮುಖರಾಯನಿಗೆ ರಾಜ ಎಂಬ ಬಿರುದನ್ನು ನೀಡಿದ.

೫೧. ೧೮೭೮ : ಶಿವಷಣ್ಮುಖರಾಯ ಮರಣ.

೫೨. ೧೮೭೯ : ಫೆಬ್ರವರಿ ೫ ಸನ್ನದಿನ ಪ್ರಕಾರ ಸೊಂಡೂರಿನ ಅಧಿಕಾರ ಮದ್ರಾಸ್ ಸರಕಾರ ನೋಡಿಕೊಳ್ಳಬೇಕಿತ್ತು.

೫೩. ೧೮೮೧ : ಸೊಂಡೂರು ಪ್ರಾಂತ್ಯದಲ್ಲಿ ಬ್ರಿಟಿಷರು ಆಸ್ಪತ್ರೆ ಕಟ್ಟಿಸಿದರು.

೫೪. ೧೮೮೨ : ಸೊಂಡೂರು ಸಂಸ್ಥಾನದಲ್ಲಿ ಶಾಲೆಗಳು ಪ್ರಾರಂಭ.

೫೫. ೧೮೮೫ : ದಕ್ಷಿಣ ಸಂಸ್ಥಾನಗಳಲ್ಲಿ ಕಾಂಗ್ರೆಸ್ ಕಮಿಟಿ ಸ್ಥಾಪನೆ.

೫೬. ೧೮೮೭-೮೮ : ಶಾಲೆಗಳ ಕಟ್ಟಡ ನಿರ್ಮಾಣ.

೫೭. ೧೮೯೨ : ವಿಠಲ್‌ರಾವ್ ಮರಣ.

೫೮. ೧೮೯೩ : ವೆಂಕಟರಾವ್ ರಾಜನೆಂದು ಘೋಷಣೆ.

೫೯. ೧೮೯೭ : ಡಿಸೆಂಬರ್ ೨ ವಿಠಲ್‌ರಾವ್ ನಿಧನ.

೬೦. ೧೮೯೮-೯೯ : ಲಂಡನ್ ಕ್ರೈಸ್ತಮಿಷನ್ ಸ್ಥಾಪನೆ.

೬೨. ೧೯೦೮ : ಯಶವಂತರಾವ್ ಹಿಂದೂರಾವ್ ಘೋರ್ಪಡೆ ಜನನ.

೬೩. ೧೯೦೮ : ಭಾರತದ ಇಂಡಿಯನ್ ಗೆಜೆಟಿಯರ್ ಪ್ರಕಾರ ಸೊಂಡೂರು ಭಾಗದಲ್ಲಿ ಪೂರ್ವ ಶಿಲಾಯುಗದ ನೆಲೆಗಳು ಮತ್ತು ಅವಶೇಷಗಳು ಹೆಚ್ಚಿನ ಸಂಖ್ಯೆಯಲ್ಲಿ ಹೊಂದಿವೆ.

೬೪. ೧೯೨೦ : ಮದರಾಸಿನ ವಿದ್ಯಾರ್ಥಿಗಳು ಉಪನ್ಯಾಸಗಳಲ್ಲಿ ಮುರಾರಿರಾಯರ ವ್ಯಕ್ತಿತ್ವವನ್ನು ಸ್ಮರಿಸಿದುದ್ದು.

೬೫. ೧೯೨೨ : ಸಂಸ್ಥಾನಿ ಪ್ರಜಾ ಪರಿಷತ್ತು ಸ್ಥಾಪನೆ.

೧೭. ೧೯೨೪ : ಯಶವಂತ ರಾವ್ ಹಿಂದೂರಾವ್ ರಾಜನೆಂದು ಘೋಷಣೆ.

೧೮. ೧೯೨೮-೧೯೪೯ : ಯಶವಂತರಾವ್ ಹಿಂದೂರಾವ್ ಘೋರ್ಪಡೆ ಆಡಳಿತಾವಧಿ.

೧೯. ೧೯೨೯ : ಯಶವಂತರಾವ್ ಹಿಂದೂರಾವ್ ಘೋರ್ಪಡೆ ಶಿಲಾದೇವಿಯನ್ನು ವಿವಾಹವಾದದು.

೨೦. ೧೯೩೨ : ಸೊಂಡೂರು ಸಂಸ್ಥಾನದಲ್ಲಿ ನ್ಯಾಯಾಂಗ ವ್ಯವಸ್ಥೆ ಜಾರಿ.

೨೧. ೧೯೩೨ : ರಾಜಾ ಪ್ರೊಕ್ಲಾಮೇಷನ್ ಹೊರಡಿಸಿದರು.

೨೨. ೧೯೩೪ : ಸೊಂಡೂರು ಸಂಸ್ಥಾನದಲ್ಲಿ ಕೃಷಿ ಸಾಲ ಸಮಸ್ಯೆ.

೨೩. ೧೯೩೬ : ಸೊಂಡೂರು ಸಾಲ ಒಪ್ಪಂದ ಆ್ಯಕ್ಟ್ ಜಾರಿಗೆ.

೨೪. ೧೯೩೮ : ಸೊಂಡೂರಿನ ಶ್ರೀಶಿವವಿಲಾಸ ಮಹಲ್ ಅರಮನೆ ನಿರ್ಮಿಸಲು ಪ್ರಾರಂಭ.

೨೫. ೧೯೩೯ : ಸೊಂಡೂರು ಸಂಸ್ಥಾನ ಬ್ರಿಟಿಷ್ ರೆಸಿಡೆಂಟಿನ ಆಳ್ವಿಕೆಗೆ ಒಳಗಾಯಿತು.

೨೬. ೧೯೪೦ : ಅರಮನೆ ನಿರ್ಮಾಣ ಪೂರ್ಣ.

೨೭. ೧೯೪೫ : ಸೊಂಡೂರಿನ ಮಂತ್ರಿಮಂಡಲ ಆ್ಯಕ್ಟ್ ಪ್ರಕಾರ ಸರದಿಯಂತೆ ಮಂತ್ರಿಗಳ ಆಯ್ಕೆ.

೨೮. ೧೯೪೬ : ಸೊಂಡೂರು ಸಂವಿಧಾನದ ಪ್ರಕಾರ ಯಾವುದೇ ಮಸೂದೆ ಅನುಮೋದನೆಗೊಂಡರೆ ಆ ಜಾಹಿರು ಯಶವಂತರಾಯರಿಂದ ಅನುಮೋದನೆ ಪಡೆಯಬೇಕಿತ್ತು.

೨೯. ೧೯೪೭ : ಭಾರತ ಸ್ವಾತಂತ್ರ್ಯ, ಬ್ರಿಟಿಷರು ಸ್ಥಳೀಯರಿಗೆ ಸಾರ್ವಭೌಮತ್ವವನ್ನು ಹಿಂದಿರುಗಿಸಿದರು.

೩೦. ೧೯೪೮ : ಬಳ್ಳಾರಿ ಜಿಲ್ಲಾ ಕಲೆಕ್ಟರ್ ಇ.ಸಿ.ಅಲ್ಲಾಡ್ಡಿ ಸರ್ ಬಲದಿಂದ ಸೊಂಡೂರಿನ ಸರಕಾರವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದ.

೩೧. ೧೯೪೯ : ಏಪ್ರಿಲ್ ೧ ರಂದು ಮೈಸೂರು ರಾಜ್ಯದಲ್ಲಿ ಸೇರಿತು.

# ಬಳ್ಳಾರಿ ಜಿಲ್ಲೆ ನಕ್ಷೆ



ಕೊಪ್ಪಳ ಜಿಲ್ಲೆ
ಶಿರಗುಪ್ಪ
ಹೊಸಪೇಟೆ
ಬಳ್ಳಾರಿ
ಅನಂತಪುರ ಜಿಲ್ಲೆ
ಸಂಡೂರು
ಹೆಚ್.ಬಿ.ಹಳ್ಳಿ
ಹಡಗಲಿ
ಕೂಡ್ಲಿಗಿ
ಚಿತ್ರದುರ್ಗ ಜಿಲ್ಲೆ
ದಾವಣಗೆರೆ ಜಿಲ್ಲೆ

# ಸಂಡೂರು ತಾಲೂಕು ನಕ್ಷೆ




1. ಸೊಂಡೂರು
2. ಕೃಷ್ಣಾ ನಗರ
3. ಭುಜಂಗ ನಗರ
4. ತಾರಾ ನಗರ
5. ಜೈಸಿಂಗ್‌ಪುರ
6. ಯಶವಂತನಗರ
7. ಜೋರನೂರು



ಕುಮಾರಸ್ವಾಮಿ ದೇವಾಲಯ



ಸಂಡೂರು ಸಂಸ್ಥಾನಿಕರ ಲಾಂಛನ



ಶಿವಷಣ್ಮುಖರಾವ್ ಘೋರ್ಪಡೆ



ರಾಮಚಂದ್ರ ವಿಠ್ಠಲರಾವ್ ಘೋರ್ಪಡೆ



ವೆಂಕಟರಾವ್ ಘೋರ್ಪಡೆ



ಯಶವಂತರಾವ್ ಹಿಂದೂರಾವ್ ಘೋರ್ಪಡೆ



ಸಂಡೂರು ಸಂಸ್ಥಾನಿಕರ ಅರಮನೆ



ಸ್ವಾತಂತ್ರ್ಯ ಹೋರಾಟ ಚಳವಳಿ ಸಂದರ್ಭದಲ್ಲಿ ಸಂಡೂರಿಗೆ
ಮಹಾತ್ಮಗಾಂಧೀಜೀಯವರ ಭೇಟಿ



ಕೃಷ್ಣಾನಗರ ಕೋಟೆಯ ಮೊದಲನೇ ದ್ವಾರ



ಕೃಷ್ಣಾನಗರ ಕೋಟೆಯ ಮೂರನೇ ದ್ವಾರ



ಕೋಟೆ ಗೋಡೆಯಲ್ಲಿರುವ ಬುರುಜು



ಕೋಟೆಯಲ್ಲಿರುವ ಮಸೀದಿ



ಮದ್ದಿನ ಮನೆ



ಚೋರ್ ಕಿಂಡಿ

